Approved by the Department of Public Instruction

# ಕರ್ನಾಟಕ ಸ್ಕೌಟ್ ಮತ್ತು ಗೈಡ್

# The Karnataka Scout and Guide

ಸಂಪುಟ : 80 ಏಪ್ರಿಲ್ 1996 ಸಂಚಿಕೆ : 1





**The Karnataka Scout and Guide**

**April 1996**

**Vol. 80** **No. 1**

*Editor :*

Prof. M. SURYANARAYANAPPA

*Associate Editor :*

Sri R. CHANDRASEKHARAN

*Members :*

Sri M. MALLIKARJUNIAH
Major T. K. NAGAMBAL
Sri K THIMMAPPA
Dr. V. N. GUBBI
Sri N. CHANDRASEKHAR
Sri B R. RAMACHANDRA RAO
Sri H. G. SURENDRA

## ಮುಖಪುಟದ ಚಿತ್ರ

ತಾ|| 7-4-96 ರಂದು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳ ಮಂಗಳೂರಿನ ಅಧಿಕೃತ ನಿವಾಸದಲ್ಲಿ ಸ್ಕೌಟಿಂಗ್ ಗೈಡಿಂಗ್‌ನಲ್ಲಿ ತೃತೀಯ ಸೋಪಾನ ಪರೀಕ್ಷೆ ಪೂರೈಸಿದ ಹಾಗೂ ರಾಜ್ಯ ಪುರಸ್ಕಾರ್ ಪ್ರಶಸ್ತಿ ಪತ್ರ ಪಡೆದ ಮಕ್ಕಳಿಗೆ 'ಪ್ರಶಸ್ತಿ ಪ್ರದಾನ' ಸಮಾರಂಭವು ನಡೆಯಿತು. ಆ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳಾದ ನಮ್ಮ ನೆಚ್ಚಿನ ಶ್ರೀ ಭರತ್‌ಲಾಲ್ ಮೀನಾ ಮಕ್ಕಳನ್ನು ಉದ್ದೇಶಿಸಿ ಮಾತನಾಡಿದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀಮತಿ ಐರೀನ್ ಡಿ. ಕುನ್ಹ, ಜಿಲ್ಲಾ ಆಯುಕ್ತೆ (ಗೈಡ್ಸ್), ಶ್ರೀಮತಿ ಡಾ|| ಸ. ಲಿಡಿಯಾ ಫರ್ನಾಂಡಿಸ್ ಡಾ|| ಕೆ. ಆರ್. ಶೆಟ್ಟಿ, ಡೈರೆಕ್ಟರ್, ಕೆ.ಎಂ.ಸಿ., ಮಂಗಳೂರು, ಶ್ರೀ ತಿರುಮಲರಾವ್, ಸಾ|| ಶಿಕ್ಷಣ ಇಲಾಖೆಯ ಉಪನಿರ್ದೇಶಕರು ಮಂಗಳೂರು ಹಾಗೂ ಶ್ರೀ ಕೆ. ತಿಮ್ಮಪ್ಪ, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಬೆಂಗಳೂರು ಇವರನ್ನು ಕಾಣಬಹುದು.

## CONTENTS



The rung of a ladder was never
meant to rest upon, but only
to hold a man's foot
Long enough to put the other
some what higher

**—Thomas Huxley**

ಏಣಿಯ ಮೆಟ್ಟಿಲೊಳು ವಿಶ್ರಮಿಸಲಳವಲ್ಲ
ಹೆಜ್ಜೆಯೊಂದನದರ ಮೇಲಿಟ್ಟು, ನೀಳವಾಗಿ ಸೆಟೆದೆದ್ದು
ಇನ್ನೊಂದನದಕೂ ಮೇಲ್ಮಟ್ಟದೊಳು ಇಡಲೆಂದೆ
ಸೂಚಿಪುದು
ಅದುವೆ ಸಾರ್ಥಕತೆಯ ಸವಿಹಾದಿಯೆಂದರಿಯುವುದು.

**—ಥಾಮಸ್ ಹಕ್ಸ್ಲೆ**

**ಕೊಂಡಜ್ಜಿ ಬ. ಷಣ್ಮುಖಪ್ಪ**
ರಾಜ್ಯ ಮುಖ್ಯ ಆಯುಕ್ತರು

**ಆತ್ಮೀಯ ಬಂಧುಗಳೇ,**

ಇದು ನಮ್ಮ ಸಂಸ್ಥೆಯ ಮಾಸ ಪತ್ರಿಕೆಯ 80ನೆಯ ಸಂಪುಟ. ನಮ್ಮ ಎಂಟು ದಶಕಗಳ ಸಾಧನೆ, ವಿವಿಧ ಚಟುವಟಿಕೆಗಳು ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಟ್ಟದ ಖ್ಯಾತಿ ಇವೆಲ್ಲವೂ ನಮಗೆ ಅತ್ಯಂತ ಹೆಮ್ಮೆಯನ್ನು ತಂದುಕೊಟ್ಟಿವೆ. ನಮ್ಮನ್ನಗಲಿ ಹೋಗಿರುವ—ಆದರೆ ತಮ್ಮ ಅಪೂರ್ವ ಆದರ್ಶಗಳನ್ನು "ದಾರಿದೀಪ"ವಾಗಿ ತೋರಿರುವ ಹಲವಾರು ಹಿರಿಯ ನಾಯಕರ ನೆನಪು ನಮ್ಮ ಹೃದಯವನ್ನು ಸ್ಪರ್ಶಿಸಿ, ಪ್ರೇರಣೆ ನೀಡಿ ಕಾರ್ಯೋನ್ಮುಖರನ್ನಾಗಿಸುತ್ತದೆ. ಇಲ್ಲಿನವರೆಗಿನ ಸಾಧನೆಗಳು ಅಗಾಧವಾಗಿರಬಹುದಾದರೂ—ಇನ್ನೂ ನಾವು ಸಾಧಿಸಬೇಕಾಗಿರುವುದು ಬಹಳಷ್ಟು ಬಾಕಿ ಇರುವುದು—ಸಂಸ್ಥೆಯಲ್ಲಿ ವಿವಿಧ ಹಂತದಲ್ಲಿ ಸೇವೆಸಲ್ಲಿಸುತ್ತಿರುವ ನಮಗೆಲ್ಲಾ ನೆನಪಿರಬೇಕು.

ಸ್ವಾಮಿ ವಿವೇಕಾನಂದರು ಹೇಳಿರುವಂತೆ "ಏಳಿ, ಎದ್ದೇಳಿ, ಗುರಿ ಸಾಧಿಸುವವರೆಗೆ ನಿಲ್ಲದಿರಿ" ಎಂಬ ಘೋಷಣೆ ನಮ್ಮೆಲ್ಲರ ಸ್ಮೃತಿಪಟಲದ ನೆನಪಿನಂಗಳದಲ್ಲಿ ಸದಾ ಜಾಗೃತವಾಗಿರಬೇಕು. ಸಂಸ್ಥೆಯ ಕಾರ್ಯಕರ್ತರೆಲ್ಲರೂ ಈ ದಿಶೆಯಲ್ಲಿ ಕಾರ್ಯೋನ್ಮುಖರಾಗಬೇಕು, ಕಾರ್ಯ ಪ್ರವೃತ್ತರಾಗಬೇಕು—ಸಂಸ್ಥೆಯ ಉದಾತ್ತ ಆದರ್ಶಗಳಾದ ವಿಶ್ವಭ್ರಾತೃತ್ವ, ಸಚ್ಚಾರಿತ್ರ್ಯ, ದೈಹಿಕ ಮತ್ತು ಮಾನಸಿಕ ಬೆಳವಣಿಗೆ, ಉತ್ತಮ ಕೌಶಲ್ಯ ಮತ್ತು ಸೇವಾ ಮನೋಭಾವನೆಗಳನ್ನು ಯುವ ಜನಾಂಗದಲ್ಲಿ ಬೆಳೆಸುವತ್ತ ನಮ್ಮೆಲ್ಲರ ಚಿಂತನೆ ಜಾಗೃತಗೊಳ್ಳಬೇಕು. ಸಂಸ್ಥೆಯ ಚಟುವಟಿಕೆಗಳು ಗುಣಾತ್ಮಕವಾಗಿಯೂ, ಗಣಾತ್ಮಕವಾಗಿಯೂ ಗಣನೀಯ ಪ್ರಮಾಣದಲ್ಲಿ ರಾಜ್ಯದಲ್ಲೆಲ್ಲಾ ಅಭಿವೃದ್ಧಿ ಹೊಂದಲಿ—ಕರ್ನಾಟಕದ ಸ್ಕೌಟ್-ಗೈಡ್‌ನ ಕಾರ್ಯಚಟುವಟಿಕೆಗಳು ಇನ್ನೂ ಹೆಚ್ಚು ಹೆಚ್ಚಾಗಿ ಬೆಳೆದು ಮುಂಬರುವ ಯುವ ಜನಾಂಗದ ಸರ್ವಾಂಗೀಣ ಅಭಿವೃದ್ಧಿಯು ಪ್ರಗತಿಪಥದಲ್ಲಿ ಸಾಗಲಿ ಎಂದು ಆಶಿಸುತ್ತೇನೆ.

ತಮ್ಮ ವಿಶ್ವಾಸಿ,

ಕೊ. ಬ. ಷಣ್ಮುಖಪ್ಪ

## ಜಿಲ್ಲಾಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮಂಡ್ಯಾ ಜಿಲ್ಲೆ ಕೊಮ್ಮೇರಹಳ್ಳಿಯಲ್ಲಿ ದಿನಾಂಕ 31-3-1996 ರಿಂದ 1-4-1996 ರ ವರೆಗೆ ಜರುಗಿದ ಜಿಲ್ಲಾಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳದ ಮುಖ್ಯ ಅತಿಥಿಗಳಾಗಿ ಆಗಮಿಸಿ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಅವರ ಜೊತೆಯಲ್ಲಿಬಂದ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಕೆ. ತಿಮ್ಮಪ್ಪ ಅವರು ಸಹ ಮೇಳದಲ್ಲಿ ಭಾಗವಹಿಸಿದರು.

ಶ್ರೀ ಎ. ಹೆಚ್. ನಾರಾಯಣ, ಅಧ್ಯಕ್ಷರು, ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ ಜಿಲ್ಲಾ ಪಂಚಾಯತ್, ಮಂಡ್ಯ, ಶ್ರೀಮತಿ ಅಂಬುಜಮ್ಮ, ಅಧ್ಯಕ್ಷಿಣಿಯವರು ಮಂಡ್ಯಾ ನಗರ ಸಭೆ ಇವರುಗಳು ಕೂಡ ಅತಿಥಿಗಳಾಗಿ ಆಗಮಿಸಿ ಸ್ಕೌಟ್ ಮತ್ತು ಗೈಡ್ ಮಕ್ಕಳಿಗೆ ಪ್ರೋತ್ಸಾಹ ನೀಡುವುದಾಗಿ ವಾಗ್ದಾನ ಮಾಡಿದರು.

ಶ್ರೀ ಸಂಪತ್ ಕುಮಾರ್ ಅಧ್ಯಕ್ಷರು ಕಾರ್ಯಕಾರಿ ಸಮಿತಿ, ಶ್ರೀಮತಿ ಹೇಮಲತ, ಜಿಲ್ಲಾ ಗೈಡ್ ಆಯುಕ್ತೆ ಶ್ರೀ ನರಸಿಂಹಮೂರ್ತಿ ಜಿಲ್ಲಾ ಸ್ಕೌಟ್ ಆಯುಕ್ತರು ಇವರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಶ್ರೀ ರಾಮಲಿಂಗು, ಜಿಲ್ಲಾ ಕಾರ್ಯದರ್ಶಿಯವರು ವಂದನಾರ್ಪಣೆ ಸಲ್ಲಿಸಿದರು.

## ರಾಷ್ಟ್ರೀಯ ಕಛೇರಿಯಲ್ಲಿ ರಾಷ್ಟ್ರಮಟ್ಟದ ಸಭೆಗಳು

12-2-96 ರಂದು ರಾಷ್ಟ್ರೀಯಮಟ್ಟದ ಸ್ಕೌಟ್ ಮತ್ತು ಗೈಡ್ ಉಪಸಮಿತಿಗಳು ಬೇರೆ ಬೇರೆಯಾಗಿ ಸಭೆ ಸೇರಿ 96-97 ರ ಅಭಿವೃದ್ಧಿ ಯೋಜನೆಗಳನ್ನು ರಾಷ್ಟ್ರೀಯ ಯೋಜನಾ ಸಮಿತಿಗೆ ಶಿಫಾರಸ್ಸು ಮಾಡಿದುವು. 12-2-97 ರಂದು ರಾಷ್ಟ್ರೀಯ ಯೋಜನಾ ಸಮಿತಿಯು ರಾಷ್ಟ್ರೀಯ ಆಯುಕ್ತರ ಅಧ್ಯಕ್ಷತೆಯಲ್ಲಿ ಸಭೆಸೇರಿ, 1986-97 ರ ಬೆಳವಣಿಗೆಯ ಗುರಿಯನ್ನು ಖಚಿತಪಡಿಸಿತು. ಹಾಗೂ ಇಡೀವರ್ಷದ ವಿವಿಧ ಕಾರ್ಯಕ್ರಮಗಳನ್ನು ನಿಗದಿಪಡಿಸಿತು.

ಅದೇ ದಿನ ಮಧ್ಯಾಹ್ನ ಹಣಕಾಸು ಉಪಸಮಿತಿಯ ಸಭೆಯೂ, ತದನಂತರದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದತ್ತಿಯ ಸಭೆಯೂ ಜರುಗಿತು.

ಕರ್ನಾಟಕ ರಾಜ್ಯದಿಂದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರೂ, ರಾಜ್ಯ ಕೋಶಾಧಿಕಾರಿಗಳಾದ ಶ್ರೀ ಎಂ. ಎ. ಖಾಲಿದ್‌ರವರೂ, ರಾಜ್ಯ ಕಾರ್ಯದರ್ಶಿಗಳಾದ ಪ್ರೊ|| ಎಂ. ಎಸ್. ಅಪ್ಪರವರೂ ದಕ್ಷಿಣ ಕನ್ನಡ ಜಿಲ್ಲಾ ಆಯುಕ್ತ (ಸ್ಕೌಟ್ಸ್) ಆದ ಶ್ರೀ ಐ. ಎ. ಕೈರನ್ನರವರೂ ಈ ವಿವಿಧ ಸಭೆಗಳಲ್ಲಿ ಭಾಗವಹಿಸಿ, ತಮ್ಮ ಅಮೂಲ್ಯ ಸಲಹೆ ಸಹಕಾರಗಳನ್ನು ನೀಡಿ ಕಾರ್ಯಕ್ರಮವು ಯಶಸ್ವಿಯಾಗುವಲ್ಲಿ ನೆರವಾದರು.

## 4ನೇ ರಾಷ್ಟ್ರೀಯ ಸ್ವತಂತ್ರ ದಳಗಳ ಮೇಳ—ಕರ್ನಾಟಕದ ಪ್ರಾತಿನಿಧ್ಯ

17-2-96 ರಿಂದ 23-2-96 ರ ವರೆಗೆ ಹರಿಯಾಣಾ ರಾಜ್ಯದ ಗದಪುರಿಯಲ್ಲಿರುವ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ "ರಾಷ್ಟ್ರೀಯ ಯುವ ಸಂಕಿರಣದಲ್ಲಿ, ರಾಷ್ಟ್ರೀಯ ಸ್ವತಂತ್ರದಳಗಳ ಮೇಳವು ನಡೆಯಿತು. ದೇಶದ 22 ರಾಜ್ಯಗಳಿಂದ ಒಟ್ಟು 388 ಜನರು ಬಂದಿದ್ದ ಮೇಳದಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ ಶ್ರೀ ಕೆ. ವಿ. ಸತ್ಯನಾರಾಯಣ ಮತ್ತು ಶ್ರೀಮತಿ ಗಿರಿಜಾ ಎಸ್. ನಾರಾಯಣನ್ ಇವರುಗಳ ನಾಯಕತ್ವದಲ್ಲಿ ಬೆಂಗಳೂರು ದಕ್ಷಿಣ, ಬೆಳಗಾಂ, ಬೀದರ್, ಶಿವಮೊಗ್ಗ, ದಾವಣಗೆರೆ ಮತ್ತು ಮಂಗಳೂರು ಜಿಲ್ಲೆಗಳಿಂದ ಒಟ್ಟು 89 ಜನ ಸ್ಕೌಟ್ಸ್ ಮತ್ತು ರೋವರ್‌ಗಳೂ, ಗೈಡ್ಸ್ ಮತ್ತು ರೇಂಜರ್‌ಗಳೂ ಭಾಗವಹಿಸಿದ್ದರು.

ಸ್ಕೌಟ್ ಕೌಶಲ್ಯಗಳಲ್ಲಿಯೂ, ಚರ್ಚೆ, ಚಿತ್ರರಚನೆ, ಪ್ರಬಂಧ ಬರೆಯುವುದು ಇತ್ಯಾದಿ ಕಲೆಗಳಲ್ಲಿಯೂ ತರಬೇತಿ ಮತ್ತು ಸ್ಪರ್ಧೆಗಳಿದ್ದುವು. ಪಕ್ಕದ ದೋಂಡ್ರಾ ಗ್ರಾಮದ ಪರ್ಯವೇಕ್ಷಣೆ ನಡೆಸಲಾಯಿತು. ಸ್ವತಂತ್ರದಳಗಳನ್ನು ದಕ್ಷತೆಯಿಂದ ನಡೆಸುವ ಬಗ್ಗೆ ಮಾಹಿತಿಯನ್ನು ನೀಡುವ, ಬೋಧಪ್ರದವಾದ ವಸ್ತುಪ್ರದರ್ಶನವನ್ನೂ ಸಹ ಏರ್ಪಡಿಸಲಾಗಿದ್ದಿತು.

# ಮಕ್ಕಳು ಯೋಗ್ಯ ಪ್ರಜೆಗಳಾಗಿ ರೂಪುಗೊಳ್ಳಲು ಹೆತ್ತವರ ಹಾಗೂ ಪೋಷಕರ ಪಾತ್ರ ಬಹಳ ಮುಖ್ಯ

—ಶ್ರೀ ಭರತ್‌ಲಾಲ ಮೀನ

'ಯೋಗ್ಯ ಶಿಕ್ಷಣ ಹಾಗೂ ಮಾರ್ಗದರ್ಶನದಿಂದ ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣವಾಗುತ್ತದೆ. ಧೈರ್ಯ ಸಾಹಸಗಳನ್ನು ಮೈಗೂಡಿಸಿಕೊಂಡು ಉತ್ತಮ ಪ್ರಜೆಗಳಾಗಿ ರೂಪುಗೊಳ್ಳುವುದು ಎಳೆಯ ಮಕ್ಕಳಿಗೇ ಸಾಧ್ಯ. ಆದುದರಿಂದ ಹಿರಿಯರು ತಮ್ಮ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಬೇಕು. ಮಕ್ಕಳು ಯೋಗ್ಯ ಪ್ರಜೆಗಳಾಗಿ ರೂಪುಗೊಳ್ಳಲು ಹೆತ್ತವರ ಹಾಗೂ ಪೋಷಕರ ಪಾತ್ರ ಬಹಳ ಹಿರಿದು' ಎಂದು ದಕ್ಷಿಣ ಕನ್ನಡದ ಜಿಲ್ಲಾಧಿಕಾರಿಗಳಾದ ಶ್ರೀ ಭರತ್‌ಲಾಲ ಮೀನ ಅವರು ಅಭಿಪ್ರಾಯಪಟ್ಟರು. ಅವರು ದಿನಾಂಕ 07-04-96 ರಂದು ಸ್ಕೌಟಿಂಗ್ ಗೈಡಿಂಗ್‌ನಲ್ಲಿ ತೃತೀಯ ಸೋಪಾನ ಪರೀಕ್ಷೆ ಪೂರೈಸಿದ ಹಾಗೂ ರಾಜ್ಯಪಾಲರ ಪ್ರಶಸ್ತಿ ಪತ್ರ ಪಡೆದ ಮಕ್ಕಳಿಗೆ 'ಪ್ರಶಸ್ತಿ ಪ್ರದಾನ' ಮಾಡಿ ಮಾತನಾಡುತ್ತಿದ್ದರು.




ರಾಜ್ಯ ಸಂಘಟನಾ ಆಯುಕ್ತ (ಸ್ಕೌಟ್ಸ್) ಶ್ರೀ ತಿಮ್ಮಪ್ಪನವರು ಸಭೆಯನ್ನುದ್ದೇಶಿಸಿ ಮಾತನಾಡಿದರು. ಜಿಲ್ಲಾಧಿಕಾರಿಗಳಾದ ಶ್ರೀ ಭರತ್‌ಲಾಲ್ ಮೀನಾ, ರಾಜ್ಯ ಸಹಆಯುಕ್ತೆ ಡಾ॥ ಸ. ಲಿಡಿಯಾ ಫರ್ನಾಂಡಿಸ್, ಶ್ರೀ ಕೆ. ಆರ್. ಶೆಟ್ಟಿ ಹಾಗೂ ಸಾ॥ ಶಿಕ್ಷಣ ಇಲಾಖೆಯ ಉಪನಿರ್ದೇಶಕ ಶ್ರೀ ಸಿ. ವಿ. ತಿರುಮಲರಾವ್ ಇವರುಗಳು ಉಪಸ್ಥಿತರಿರುವುದನ್ನು ಚಿತ್ರದಲ್ಲಿ ಕಾಣಬಹುದು.

ಜಿಲ್ಲಾಧಿಕಾರಿಗಳ ನಿವಾಸದ ಆವರಣದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಏರ್ಪಡಿಸಲಾದ ಈ ಸಮಾರಂಭದಲ್ಲಿ ಮಾತನಾಡುತ್ತಾ ಅವರು ಸಹಕಾರ ಸೌಹಾರ್ದ ಮನೋಭಾವನೆ ಮಕ್ಕಳಲ್ಲಿ ಮೈಗೂಡಿ ನಾಳಿನ ಉತ್ತಮ ಪ್ರಜೆಗಳಾಗಬೇಕು. ಸ್ಕೌಟ್ ಚಳುವಳಿಯನ್ನು ಮಕ್ಕಳಿಗಾಗಿಯೇ ಅಳವಡಿಸಿಕೊಳ್ಳಲಾಗಿದೆ. ಸ್ಕೌಟ್ ಗೈಡ್‌ಗಳು ಈ ಆದರ್ಶಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ಹೆತ್ತವರು ಹಾಗೂ ಸಾರ್ವಜನಿಕರು ಇಂತಹ ಸಂಸ್ಥೆಗಳಿಗೆ ಸಹಕಾರ ನೀಡಬೇಕು ಎಂದು ಹೇಳಿದರು.

ಸಮಾರಂಭದ ಅತಿಥಿಗಳಲ್ಲಿ ಓರ್ವರಾದ ಜಿಲ್ಲಾ ಪಂಚಾಯತ್ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಾದ ಶ್ರೀ ಸಿ. ವಿ. ತಿರುಮಲರಾವ್ ಅವರು ಮಾತನಾಡಿ 'ದಕ್ಷಿಣ ಕನ್ನಡ ಜಿಲ್ಲೆ ಎಲ್ಲಾ ರಂಗಗಳಲ್ಲೂ ಹೇಗೆ ಮುನ್ನಡೆ ಸಾಧಿಸಿದೆಯೋ ಹಾಗೆಯೇ ಸ್ಕೌಟ್ ಚಳುವಳಿಯಲ್ಲೂ ಮುನ್ನಡೆ ಸಾಧಿಸಿದೆ' ಎಂದು ಶ್ಲಾಘಿಸಿದರು. ಇಂದಿನ ಶಿಕ್ಷಣ ವ್ಯವಸ್ಥೆಯನ್ನು ವಿವರಿಸುತ್ತಾ "ಮಕ್ಕಳು ಪುಸ್ತಕ ಹೊರುವ ಕತ್ತೆಗಳಾಗಬಾರದು. ನೆಗೆಯುವ ಕುದುರೆಗಳಾಗಬೇಕು, ಓಡುವ, ಹಾರುವ ಹಕ್ಕಿಗಳಾಗಬೇಕು" ಎಂದು ಅಭಿಪ್ರಾಯ ಪಟ್ಟರು. ಇಂದಿನ ಶಿಕ್ಷಣದಲ್ಲಿ ಸ್ಕೌಟ್ ಚಳುವಳಿಯ ಮಹತ್ವವನ್ನು ವಿವರಿಸಿದರು.

ರಾಜ್ಯ ಸಂಸ್ಥೆಯ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಕೆ. ತಿಮ್ಮಪ್ಪ ಅವರು ಮಾತನಾಡಿ ಜಿಲ್ಲೆಯ ಸ್ಕೌಟ್/ಗೈಡ್ ಚಳುವಳಿಯ ಬಗ್ಗೆ ಮೆಚ್ಚುಗೆ ಸೂಚಿಸಿದರು. ಸಂಸ್ಥೆಯ ಹಿತಚಿಂತಕರಾದ ಶ್ರೀ ಗಣಪತಿ ಪೈ, ಬಿ. ರಾಜ್ಯ ಸಹ ಆಯುಕ್ತರು (ಗೈಡ್) ಆದ ಡಾ. ಸ. ಲಿಡಿಯಾ ಫರ್ನಾಂಡಿಸ್ ಅವರು ವೇದಿಕೆಯಲ್ಲಿದ್ದರು. ಶ್ರೀಗಳಾದ ಕಿಟ್ಟಣ್ಣ ರೈ, (ನಿವೃತ್ತ ಸಿ ಎಫ್.ಓ. ಹಾಗೂ ಜಿಲ್ಲಾ ಕೋಶಾಧಿಕಾರಿ) ಡಾ. ಕೆ. ಆರ್. ಶೆಟ್ಟಿ (ಡೈರೆಕ್ಟರ್, ಕೆ.ಎಂ.ಸಿ. ಮಂಗಳೂರು) ವೈ. ಮಹಮದ್ ಕುಂಞ (ಮ್ಯಾನೇಜಿಂಗ್ ಡೈರೆಕ್ಟರ್, ಏನಪೋಯ ಗ್ರೂಪ್ಸ್) ಕೆ. ಎನ್. ಎಸ್. ಶೆಟ್ಟಿ (ಜಿಲ್ಲಾ ಕಾರ್ಯದರ್ಶಿ) ಮೊದಲಾದ ಗಣ್ಯರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಪ್ರಾರಂಭದಲ್ಲಿ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಐರಿನ್ ಡಿ' ಕುನ್ಹ ಸ್ವಾಗತಿಸಿ ಕೊನೆಯಲ್ಲಿ ಸಹಾಯಕ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ನಾಗರಾಜ ಶೆಟ್ಟಿ ವಂದಿಸಿದರು. ಶ್ರೀ ಯು. ಗೋಪಾಲಕೃಷ್ಣ ಭಟ್ ಕಾರ್ಯಕ್ರಮ ನಿರ್ವಹಿಸಿದರು.



## ರಾಜ್ಯ ತರಬೇತಿ ತಂಡಕ್ಕೆ ಹೊಸದಾಗಿ ಸೇರಿದವರ ಸಂಕ್ಷಿಪ್ತ ಪರಿಚಯ



**ಶ್ರೀ ವಸಂತ :** 37 ವರ್ಷ ವಯಸ್ಸಿನ ಶ್ರೀ ವಸಂತ, ಎಂ.ಎ.ಬಿ.ಎಡ್., ಇವರು ಭಾಷಾ ಶಿಕ್ಷಕರಾಗಿ ಕಾರ್ಕಳ ತಾಲ್ಲೂಕು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕಲ್ಲಮುಂಡ್ಕೂರ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. 1985ರಲ್ಲಿ ತರಬೇತಿ ಪಡೆದು ಸ್ಕೌಟ್ ಮಾಸ್ಟರಾಗಿ ಸೇವೆ ಪ್ರಾರಂಭಿಸಿದ ಇವರು 1989ರಲ್ಲಿ ವುಡ್‌ಬ್ಯಾಡ್ಜ್ ಪಡೆದು ಸೆಪ್ಟಂಬರ್ 1995 ರಲ್ಲಿ ಪಚಮಢಿಯಲ್ಲಿ ತರಬೇತಿ ಪಡೆದು ಇದೀಗ ಎ.ಎಲ್.ಟಿ. (ಸ್ಕೌಟ್ಸ್) ಆಗಿರುತ್ತಾರೆ. ಸಂಸ್ಥೆಯು ಇವರಿಂದ ಗಣನೀಯವಾದ ಗುಣಾತ್ಮಕ ಸೇವೆಯನ್ನು ಆಶಿಸುತ್ತದೆ.

# ಅಂತರರಾಷ್ಟ್ರೀಯ ಸಮಾವೇಶಗಳು

ರಾಷ್ಟ್ರೀಯ ಕಛೇರಿ ಸುತ್ತೋಲೆ ಸಂ. 34, 15-3-1996 ರಲ್ಲಿ ಅಧಿಕೃತವಾಗಿ ಪ್ರಕಟವಾಗಿರುತ್ತದೆ
ಇಚ್ಛೆಯುಳ್ಳವರು ವಿವರಗಳಿಗಾಗಿ ರಾಜ್ಯ ಕಾರ್ಯದರ್ಶಿಯವರನ್ನು ಸಂಪರ್ಕಿಸುವುದು.

## 1. ರಾಷ್ಟ್ರೀಯ ಸ್ಕೌಟ್ ಜಾಂಬೋರಿ, ಯು.ಎಸ್.ಎ.

| | | | |
|---|---|---|---|
| ಸ್ಥಳ | : | ಫೋರ್ಟ್ ಎ. ಪಿ. ಹಿಲ್ಸ್, ಫ್ರೆಡರಿಕ್ಸ್‌ಬರ್ಗ್ ಸಮೀಪ, ವರ್ಜೀನಿಯ | |
| ಅವಧಿ | : | ಜುಲೈ 28 ರಿಂದ ಆಗಸ್ಟ್ 6, 1997 | |
| ಆಹ್ವಾನ | : | 8 ಸ್ಕೌಟುಗಳು + ಒಬ್ಬ ನಾಯಕ. | |
| ಅರ್ಹತೆ | : | ರಾಜ್ಯಪುರಸ್ಕಾರ್ ಸ್ಕೌಟ್ ; ರಾಷ್ಟ್ರಪತಿ ಸ್ಕೌಟ್‌ಗೆ ಆದ್ಯತೆ ನೀಡಲಾಗುವುದು. ಇಂಗ್ಲಿಷ್ ಭಾಷೆಯಲ್ಲಿ ವ್ಯವಹರಿಸುವಂತಿರಬೇಕು. ಶಿಬಿರವಾಸದ ಅನುಭವವಿರಬೇಕು. | |
| ವಯೋಮಿತಿ | : | 13 ರಿಂದ 17 ವರ್ಷಗಳು. | |
| ಅಂದಾಜು ವೆಚ್ಚ | : | ಸಮಾವೇಶ ಶಿಬಿರ | ರೂ. 1,000-00 |
| | | ಊರಿನಿಂದ ದೆಹಲಿಗೆ ಮತ್ತು ವಾಪಸ್ (ರೈಲು ಖರ್ಚು) | ರೂ. 1,000-00 |
| | | ವೀಸಾಶುಲ್ಕ ಮತ್ತು ವಿಮಾನ ನಿಲ್ದಾಣ ತೆರಿಗೆ | ರೂ. 1,500-00 |
| | | ವಿಮಾನಯಾನ ಹೋಗಿ ಬರಲು | ರೂ. 46,185-00 |
| | | ಆಡಳಿತ ಶುಲ್ಕ ಯು.ಎಸ್. $40/- | ರೂ. 1,440-00 |
| | | ಎಫ್.ಟಿ.ಎಸ್. ಒಳಗೇ ಈ $ 40/- ಕೊಡಬೇಕಾಗುತ್ತದೆ. | |
| | | ಉಳಿದದ್ದು ಅವಶ್ಯಕತೆಗೆ ತಕ್ಕಂತೆ ಆದರೆ ಯು.ಎಸ್. $ 2,000 ಮೀರಬಾರದು. (ಅಂದಾಜು) | ರೂ. 10,000-00 |

**ಸೂಚನೆ :** ಇಷ್ಟವುಳ್ಳವರು ರೂ. 2,000/- ಮುಂಜಾಗ್ರತಾ ಶುಲ್ಕದೊಡನೆ (ಡಿ.ಡಿ. ಮೂಲಕ) 31-12-1996 ರ ಒಳಗಾಗಿ ಅರ್ಜಿ ಸಲ್ಲಿಸುವುದು. ಆಯ್ಕೆಯಾದಲ್ಲಿ ಈ ಮುಂಗಡ ಶುಲ್ಕವನ್ನು ವಾಪಸ್ ಮಾಡುವುದಿಲ್ಲ.

## 2. 3ನೇ ಏಷಿಯಾ ಪೆಸಿಫಿಕ್ / 10 ನೇ ಆಸ್ಟ್ರೇಲಿಯನ್ ವೆಂಚರ್

| | | | |
|---|---|---|---|
| ಸ್ಥಳ | : | ವುಡ್‌ಹೌಸ್ ಸ್ಕೌಟ್‌ಕ್ಯಾಂಪ್ ಆವರಣ, ಅಡಿಲೈಡ್ ಬೆಟ್ಟಗಳು, ದಕ್ಷಿಣ ಆಸ್ಟ್ರೇಲಿಯಾ. | |
| ಅವಧಿ | : | 3 ರಿಂದ 12 ಜನವರಿ 1997. | |
| ಅರ್ಹತೆ | : | ಶಿಬಿರಾನುಭವವಿರುವ ಸ್ಕೌಟ್ ಗೈಡ್‌ಗಳು. | |
| ವಯೋಮಿತಿ | : | 15 ರಿಂದ 18 ವರ್ಷಗಳು. | |
| ಅಂದಾಜು ಖರ್ಚು | : | ಸಮಾವೇಶ ಶಿಬಿರ | ರೂ. 1,000-00 |
| | | ಜಾಂಬೋರಿ ಶುಲ್ಕ—ವಿಮಾನಯಾನ ದರ | ರೂ. 35,220-00 |
| | | ದೆಹಲಿಯಿಂದ ಅಡಿಲೈಡ್ ಮತ್ತು ವಾಪಸ್ | |
| | | ವೀಸಾಶುಲ್ಕ ಮತ್ತು ವಿಮಾನ ನಿಲ್ದಾಣ ತೆರಿಗೆ | ರೂ. 1,500-00 |
| | | ಊರಿನಿಂದ ದೆಹಲಿಗೆ ಮತ್ತು ವಾಪಸ್ (ರೈಲು ಖರ್ಚು) | ರೂ. 1,000-00 |
| | | ಎಫ್.ಟಿ.ಎಸ್. ಯು.ಎಸ್. $ 2000/- ವರೆಗಿರುತ್ತದೆ. | |
| | | ಇದರಲ್ಲಿಯೆ ಜಾಂಬೋರಿ ಶುಲ್ಕವನ್ನು ಕಟ್ಟಬೇಕಾಗುತ್ತದೆ. | ರೂ. 70,000-00 |

**ಸೂಚನೆ :** ಇಚ್ಛೆಯುಳ್ಳವರು ರೂ. 2000/- ಮುಂಜಾಗ್ರತಾ ಶುಲ್ಕದೊಡನೆ (ಡಿ.ಡಿ. ಮೂಲಕ) 30-9-1996 ರ ಒಳಗಾಗಿ ಅರ್ಜಿ ಸಲ್ಲಿಸುವುದು. ಆಯ್ಕೆಯಾದಲ್ಲಿ ಈ ಹಣವನ್ನು ವಾಪಸ್ ಮಾಡುವುದಿಲ್ಲ.

### 3. 9ನೇ ಮಲೇಷಿಯಾ ರಾಷ್ಟ್ರೀಯ ಜಾಂಬೋರಿ

| | | | |
|---|---|---|---|
| ಸ್ಥಳ | : | ಶ್ರೀ ಕ್ಲವಾಂಗ್ ಶಿಬಿರ, ಕೌಲತೆರೆಂಗಾನು (ತೆರೆಂಗಾನು ರಾಜ್ಯದ ರಾಜಧಾನಿ) ಪಿನಿಂದ 90 ಕಿ.ಮೀ. | |
| ಅರ್ಹತೆ | : | ಶಿಬಿರಾನುಭವವಿರಬೇಕು. ರಾಜ್ಯ ಪುರಸ್ಕಾರ್ ಆಗಿರಬೇಕು. | |
| ವಯೋಮಿತಿ | : | 15ವರ್ಷ ವಯಸ್ಸಾಗಿರಬೇಕು. | |
| ಅಂದಾಜು ವೆಚ್ಚ | : | ಸಮಾವೇಶ ಶಿಬಿರ | ರೂ. 1,000-00 |
| | | ಊರಿನಿಂದ ದೆಹಲಿಗೆ ಮತ್ತು ವಾಪಸ್ (ರೈಲು ಖರ್ಚು) | ರೂ. 1,000-00 |
| | | ವಿಮಾನಯಾನ ದರ (ಅಂದಾಜು) | ರೂ. 18,500-00 |
| | | ವೀಸಾಶುಲ್ಕ ಮತ್ತು ವಿಮಾನ ನಿಲ್ದಾಣ ತೆರಿಗೆ | ರೂ. 1,000-00 |
| | | ಎಫ್.ಟಿ.ಎಸ್. ಒಳಗೆ ಕೊಡಬೇಕಾದ ಶಿಬಿರ ಶುಲ್ಕ ಯು.ಎಸ್.$ 250/- | |
| | | ಎಫ್.ಟಿ.ಎಸ್. $ 2,000/- ವರೆಗೆ ಲಭ್ಯವಿರುತ್ತದೆ | ರೂ. 70,000-00 |

**ಸೂಚನೆ :** ಇಷ್ಟವುಳ್ಳವರು ರೂ. 2,000/- ಮುಂಜಾಗ್ರತಾ ಶುಲ್ಕದೊಡನೆ (ಡಿ.ಡಿ. ಮೂಲಕ) 31-12-1996 ರ ಒಳಗಾಗಿ ಅರ್ಜಿ ಸಲ್ಲಿಸುವುದು. ಆಯ್ಕೆಯಾದಲ್ಲಿ ಈ ಹಣವನ್ನು ವಾಪಸ್ ಮಾಡುವುದಿಲ್ಲ.

---

## ಜಿಲ್ಲಾ "ಉತ್ತಮ ಶಿಕ್ಷಕಿ" ಪ್ರಶಸ್ತಿ ಪಡೆದ ಗೈಡರ್



**ಶ್ರೀಮತಿ ಜೆ. ಎಸ್. ವಸುಂಧರ :** 1976 ರಿಂದ ಗೈಡರ್ ಆಗಿರುವ ಶ್ರೀಮತಿ ಜೆ. ಎಸ್. ವಸುಂಧರ ಇವರು 83 ರಿಂದ ವುಡ್‌ಬಾಡ್ಜ್‌ಧಾರಿಗಳಾಗಿರುತ್ತಾರೆ. ಜಿಲ್ಲಾ ಮಟ್ಟದಲ್ಲಿಯೂ, ರಾಜ್ಯಮಟ್ಟದಲ್ಲಿಯೂ ಅನೇಕ ತರಬೇತಿ ಶಿಬಿರಗಳಲ್ಲಿ ಶಿಕ್ಷಕ ವರ್ಗದಲ್ಲಿ ಕೆಲಸ ಮಾಡಿರುತ್ತಾರೆ. 1985 ರಲ್ಲಿ ರಾಜ್ಯದ ಗೈಡ್‌ತಂಡದ ನಾಯಕಿಯಾಗಿ "ರಾಷ್ಟ್ರಪತಿ ಗೈಡ್" ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ನವದೆಹಲಿಯ ರಾಷ್ಟ್ರಪತಿ ಭವನಕ್ಕೂ ಹೋಗಿ ಬಂದಿರುತ್ತಾರೆ. ವೃತ್ತಿತಃ ಸಂಗೀತ ಶಿಕ್ಷಕಿಯಾದ ಇವರಿಗೆ ಸೆಪ್ಟಂಬರ್ 1994 ರಲ್ಲಿ "ಉತ್ತಮ ಶಿಕ್ಷಕಿ" ಪ್ರಶಸ್ತಿ ದೊರಕಿರುವುದು ಸಮಂಜಸವಾಗಿದೆ. ಭದ್ರಾವತಿಯಲ್ಲಿ ಹೆಸರುಗಳಿಸಿ ಇದೀಗ ಬೆಂಗಳೂರಿನ ಆಡುಗೋಡಿ ಬಾಲಿಕಾ ಪಾಠಶಾಲೆಗೆ ವರ್ಗಾವಣೆಯಲ್ಲಿ ಬಂದಿರುತ್ತಾರೆ. ಸೋದರಿ ವಸುಂಧರ ಅವರನ್ನು ಅಭಿನಂದಿಸುತ್ತೇವೆ ಹಾಗೂ ಅವರಿಂದ ಸಂಸ್ಥೆಯು ಇನ್ನೂ ಹೆಚ್ಚು ಗುಣಾತ್ಮಕ ಸೇವೆಯನ್ನು ಆಶಿಸುತ್ತದೆಂದು ತಿಳಿಸಬಯಸುತ್ತೇವೆ.

# ಬೇಸಿಕ್ ತರಬೇತಿ ಶಿಬಿರಗಳು – ದಕ್ಷಿಣ ಕನ್ನಡ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ದಕ್ಷಿಣ ಕನ್ನಡ : ಸ್ಥಳೀಯ ಸಂಸ್ಥೆ ಪುತ್ತೂರು ಇವರ ಆಶ್ರಯದಲ್ಲಿ ಈಶ್ವರ ಮಂಗಳ ಶ್ರೀ ಪಂಚಲಿಂಗೇಶ್ವರ ಪ್ರೌಢಶಾಲಾ ಆವರಣದಲ್ಲಿ ದಿನಾಂಕ 11-4-96 ರಿಂದ 20-4-96ರ ವರೆಗೆ ಬೇಸಿಕ್ ಕಬ್ ಮಾಸ್ಟರ್ಸ್, ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ ಹಾಗೂ ಫ್ಲಾಕ್ ಲೀಡರ್ಸ್ ತರಬೇತಿ ಶಿಬಿರಗಳು ನಡೆದವು.

| | |
|---|---|
| ಶ್ರೀ ಆನಂದ ಅಡಿಗ | ಎ.ಎಲ್.ಟಿ. (ಸ್ಕೌಟ್) |
| ಶ್ರೀಮತಿ ಡಿ. ಸಾರಮ್ಮ | ಎಲ್.ಟಿ. (ಕಬ್) |
| ಶ್ರೀಮತಿ ಕೆ. ಕೆ. ಲೀಲಾ | ಎ.ಎಲ್.ಟಿ. (ಗೈಡ್) |
| ಸಿಸ್ಟರ್ ಮೋಂಥಿ ರೋಡ್ರಿಗ್ಸ್ | ಎ.ಎಲ್.ಟಿ. (ಬುಲ್‌ಬುಲ್) |

ಇವರುಗಳು ಶಿಬಿರದ ನಾಯಕರುಗಳಾಗಿದ್ದರು.

ಪುತ್ತೂರು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೃಷ್ಣಮೂರ್ತಿಯವರು ಶಿಬಿರಗಳನ್ನು ಉದ್ಘಾಟಿಸಿದರು. ದಿನಾಂಕ 19-4.96 ರಂದು ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಗಣಪತಿ ನಾಯಕ್‌ರವರು ವಹಿಸಿದ್ದರು. ಶ್ರೀ ನಾರಾಯಣ ಶೆಟ್ಟಿ, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಶ್ರೀ ಎಂ. ಎ. ಚೆಲ್ಲಯ್ಯ, ಹೆಡ್‌ಕ್ವಾರ್ಟರ್ಸ್ ಕಮೀಷನರ್ ಫಾರ್ ಪಬ್ಲಿಕ್ ರಿಲೇಷನ್ಸ್ ಹಾಗೂ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳೂ ಮತ್ತು ಶಾಲಾ ಮುಖ್ಯೋಪಾಧ್ಯಾಯರೂ ಆದ ಶ್ರೀ ಸಂಜೀವ ಶೆಟ್ಟಿ ಇವರುಗಳು ಮುಖ್ಯ ಅತಿಥಿಗಳಾಗಿದ್ದರು.

ಗೈಡ್ ಕಮೀಷನರ್ ಶ್ರೀಮತಿ ಐರಿನ್ ಡಿ' ಕುನ್ಹರವರು ಸ್ವಾಗತಿಸಿದರು. ಶಿಬಿರದ ನಾಯಕರುಗಳಿಂದ ವರದಿ ಶಿಬಿರಾರ್ಥಿಗಳಿಂದ ಅನಿಸಿಕೆ, ನಂತರ 8 ಜನ ಹಿಮಾಲಯ ವುಡ್‌ಬ್ಯಾಡ್ಜ್ ಹೋಲ್ಡರ್‌ಗಳಿಗೆ ಶ್ರೀ ನಾರಾಯಣ ಶೆಟ್ಟಿ ಅವರು ಪಾರ್ಚ್‌ಮೆಂಟ್ಸ್ ಮತ್ತು ಬೀಡ್ಸ್ ಪ್ರದಾನ ಮಾಡಿದರು ಮತ್ತು ರಾಜ್ಯ ಸಂಸ್ಥೆ ಪರವಾಗಿ ಅಭಿನಂದನೆ ತಿಳಿಸಿದರು. ಶ್ರೀ ಸದಾಶಿವ ಭಟ್, ಎ.ಎಲ್.ಟಿ. (ಸ್ಕೌಟ್ಸ್) ಇವರು ಪರಿಚಯಿಸಿದರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ವಾಲ್ಟರ್ ಜೆ. ಪಿಂಟೋರವರು, ಸಹಾಯಕರುಗಳು ಉಪಸ್ಥಿತರಿದ್ದರು. ಕೊನೆಯಲ್ಲಿ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಂ. ಜೆ. ಕಜೆಯವರು ಎಲ್ಲರನ್ನೂ ವಂದಿಸಿದರು.

## ರಾಷ್ಟ್ರೀಯ ಕಛೇರಿಯ ಮುಕ್ತದಳಗಳ ಕೇಂದ್ರಸ್ಥಾನ ಆಯುಕ್ತರ ಭೇಟಿ

ತಮಿಳುನಾಡು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತರೂ, ರಾಷ್ಟ್ರೀಯ ಕಛೇರಿಯ ಮುಕ್ತದಳಗಳ ಕೇಂದ್ರ ಸ್ಥಾನ ಆಯುಕ್ತರೂ ಆದ ಡಾ|| ಸಿ. ಪಳನಿವೇಲುರವರು, 15-4-96 ರಂದು ಕರ್ನಾಟಕದ ರಾಜ್ಯ ಕಛೇರಿಗೆ ಭೇಟಿ ನೀಡಿದರು. ರಾಜ್ಯ ಸಂಸ್ಥೆಯ ಪದಾಧಿಕಾರಿಗಳೂ, ಸದಸ್ಯರುಗಳೂ ಹಾಜರಿದ್ದರು. ರಾಜ್ಯ ಕಾರ್ಯದರ್ಶಿಗಳಾದ ಪ್ರೊ|| ಸೂರ್ಯನಾರಾಯಣಪ್ಪನವರು ಸ್ವಾಗತಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮುಖ್ಯ ಅತಿಥಿಗಳನ್ನು ಸಭೆಗೆ ಪರಿಚಯ ಮಾಡಿದ್ದೇ ಅಲ್ಲದೆ, ಮುಖ್ಯ ಅತಿಥಿಗಳಿಗೆ ರಾಜ್ಯದ ಚಟುವಟಿಕೆಗಳ ಬಗ್ಗೆ ಅವಲೋಕನ ಮಾಡಿದರು. ರಾಜ್ಯ ಗೈಡ್ ಆಯುಕ್ತೆ ಶ್ರೀಮತಿ ಲಲಿತಾ ಕೃಷ್ಣಸ್ವಾಮಿಯವರೂ ಸಹ ಸಭೆಯನ್ನುದ್ದೇಶಿಸಿ ಮಾತನಾಡಿದರು. ಡಾ|| ಪಳನಿವೇಲುರವರು ರಾಜ್ಯದ ಸ್ಕೌಟ್ ಗೈಡ್ ಕಾರ್ಯಕ್ರಮಗಳ ಬಗ್ಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ನಮ್ಮೆರಡೂ ರಾಜ್ಯಗಳು ಪರಸ್ಪರ ಹೊಂದಾಣಿಕೆಯಲ್ಲಿ ಮುಂದುವರಿಯುವ ಬಗ್ಗೆ ಆಶೆಯನ್ನೂ ವ್ಯಕ್ತಪಡಿಸಿದರು. ರಾಜ್ಯ ಸಂಘಟನಾ ಆಯುಕ್ತ ಶ್ರೀ ಕೆ. ತಿಮ್ಮಪ್ಪನವರು ವಂದನಾರ್ಪಣೆ ಮಾಡಿದರು.

# ಅಲ್ಲಲ್ಲಿ ಏನೇನು ?

**ಉತ್ತರ ಕನ್ನಡ ಜಿಲ್ಲೆ**

21-3-96, 45 ಶಿಕ್ಷಕ ಶಿಕ್ಷಕಿಯರು ಸೇರಿದ್ದ, ಕಾರವಾರ ತಾಲ್ಲೂಕು ಮಟ್ಟದ ಸಭೆಯಲ್ಲಿ "ಸಾಮಾನ್ಯ ಮಾಹಿತಿ" ಶಿಬಿರವನ್ನು ನಡೆಸಲಾಯಿತು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ವಿ. ವಿ. ನಾಯ್ಕ ಶಿಬಿರವನ್ನು ನಡೆಸಿದರು. ಎಸ್. ಜಿ. ವಿ. ಆದ ಶ್ರೀ ಕೆ. ರಮೇಶಾಚಾರ್ ಸಹಾಯಕರಾಗಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಡಿ. ಜಿ. ಜೋಷಿ ಹಾಗೂ ಜಿಲ್ಲಾ ಖಜಾಂಚಿಗಳಾದ ಶ್ರೀ ವಿ. ಟಿ. ನಾಯ್ಕರು ಶಿಬಿರವನ್ನುದ್ದೇಶಿಸಿ ಮಾತನಾಡಿದರು.

ಹಳಿಯಾಳ ಸ್ಥಳೀಯ ಸಂಸ್ಥೆಯ ವತಿಯಿಂದ 22/23-2-96 ದಿನಗಳಂದು ತಾಲ್ಲೂಕು ಮಟ್ಟದ ಸ್ಕೌಟ್ ಗೈಡ್ ಮೇಳ ಹಾಗೂ ಬಿ. ಪಿ. ರವರುಗಳ ಜನ್ಮದಿನಾಚರಣೆ ಹಾಗೂ ಚಿಂತನಾ ದಿನವನ್ನು ಆಚರಿಸಲಾಯಿತು. ನಗರದ ಪ್ರಮುಖ ರಾಜಮಾರ್ಗಗಳಲ್ಲಿ ಪಥಚಲನೆಯ ನಂತರ ಮಾನ್ಯ ತಹಶೀಲ್‌ದಾರರು 22-2-96 ರಂದು ಮೇಳವನ್ನು ಉದ್ಘಾಟಿಸಿದರು. 23-2-96ರ ಸಂಜೆ ಮುಕ್ತಾಯ ಸಮಾರಂಭಕ್ಕೆ ಬಿ.ಇ.ಓ. ಶ್ರೀ ಉದಯನಾಯ್ಕರು ಮುಖ್ಯ ಅತಿಥಿಗಳಾಗಿದ್ದರು. ಅಧಿಕ ಸಂಖ್ಯೆಯಲ್ಲಿ ಮಕ್ಕಳು ಭಾಗವಹಿಸಿದ್ದರು.



## ಚಿಕ್ಕಮಗಳೂರು ಜಿಲ್ಲೆ

22-2-96 ರಂದು ಚಿಕ್ಕಮಗಳೂರು ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ "ಸಂಸ್ಥಾಪಕರ ದಿನ" ಮತ್ತು "ಚಿಂತನಾದಿನ"ವನ್ನು ಆಚರಿಸಲಾಯಿತು. 400 ಮಂದಿ ಸ್ಕೌಟ್ ಮತ್ತು ಗೈಡುಗಳು ಭಾಗವಹಿಸಿದ್ದರು. ವಿವಿಧ ಸ್ಕಾಟ್ ಕೌಶಲ್ಯಗಳಲ್ಲಿ ಸ್ಪರ್ಧೆಗಳನ್ನು ನಡೆಸಲಾಯಿತು. ಶ್ರೀ ಎಂ. ಯಸ್. ಷಡಕ್ಷರಿ, ಡಿ.ಟಿ.ಸಿ. (ಯಸ್) ರವರು ಮೇಳದ ಸಂಚಾಲಕರಾಗಿದ್ದರು. ಜನಮಿತ್ರ ಪತ್ರಿಕೆಯ ಸಂಪಾದಕ ಶ್ರೀ ಗಿರಿಜಾಶಂಕರ್‌ರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಸಿ. ಯಂ. ಪಿಂಟೋರವರು ಸಮಾರಂಭದಲ್ಲಿ ಭಾಗವಹಿಸಿದ್ದರು.

ಕೊಪ್ಪ ತಾಲ್ಲೂಕು ಸ್ಥಳೀಯ ಮಟ್ಟದ ಸ್ಕೌಟ್ ಗೈಡ್ ಮತ್ತು ಕಬ್ ಬುಲ್‌ಬುಲ್‌ಗಳ ಮೇಳವು 22-2-96 ರಂದು ಕೊಪ್ಪದಲ್ಲಿ ಜರುಗಿತು. ಬೆಳಗ್ಗೆ 9 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ಮತ್ತು ಧ್ವಜ ವಂದನೆಯೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯಿತು.

ಜಿಲ್ಲಾ ಪಂಚಾಯತ್ ಸದಸ್ಯೆ ಶ್ರೀಮತಿ ವಿಜಯಲಕ್ಷ್ಮಿ ದಾಸಪ್ಪಗೌಡರ ಅಧ್ಯಕ್ಷತೆಯಲ್ಲಿ ಡಿ.ವೈ.ಎಸ್.ಪಿ. ಶ್ರೀ ಕೃಷ್ಣಪ್ಪನವರು ಉದ್ಘಾಟಿಸಿದರು. ಶ್ರೀ ಕೆ. ಜಿ. ಎಸ್. ಶಾಸ್ತ್ರಿಗಳು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದು ಸಂಸ್ಥಾಪಕರುಗಳಾದ ಲಾರ್ಡ್ ಮತ್ತು ಲೇಡಿ ಬೇಡನ್ ಪೊವೆಲ್‌ರವರುಗಳ ಬಗ್ಗೆ ಉಪನ್ಯಾಸ ಮಾಡಿದರು. ವಿವಿಧ ಚಟುವಟಿಕೆಗಳು, ಜಿಲ್ಲಾ ತರಬೇತಿ ಆಯುಕ್ತೆ ಸಿಸ್ಟರ್ ಸಿಂಥಿಯಾ ಮೇರಿ ಸುವಾರಿಸ್ ಅವರ ನಾಯಕತ್ವದಲ್ಲಿ ಜರುಗಿದವು. ಸಂಜೆ ನಡೆದ ಪಥಚಲನೆ ಆಕರ್ಷಣೀಯವಾಗಿತ್ತು. ಸಮಾರೋಪ ಸಮಾರಂಭವು ತಾಲ್ಲೂಕು ಪಂಚಾಯತ್ ಅಧ್ಯಕ್ಷ ಶ್ರೀ ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ತಾಲ್ಲೂಕು ಪಂಚಾಯತ್ ಸದಸ್ಯೆ ಶ್ರೀಮತಿ ಜಾನಕಿ ನಾಗರಾಜ್‌ರವರು ಸಮಾರೋಪ ಭಾಷಣ ಮಾಡಿದರು. ರಾಜ್ಯ ಪುರಸ್ಕಾರ ಪ್ರಶಸ್ತಿ ವಿಜೇತರಾದ ಐದು ಗೈಡುಗಳನ್ನು ಸನ್ಮಾನಿಸಲಾಯಿತು. ಭವ್ಯ ಶಿಬಿರಾಗ್ನಿ ಕಾರ್ಯಕ್ರಮಕ್ಕೆ ನ್ಯಾಯವಾದಿ ಮೇಗ ಚಂದ್ರಶೇಖರ್ ಮುಖ್ಯ ಅತಿಥಿಗಳಾಗಿದ್ದರು.

ಶೃಂಗೇರಿ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ ಶೃಂಗೇರಿಯಲ್ಲಿ 5-3-96 ರಂದು ದಿ|| ಹಲಗಪ್ಪನವರ ಸ್ಮರಣಾರ್ಥ ಸಂತಾಪ ಸೂಚಕ ಸಭೆಯು ಜರುಗಿತು.

12-3-96 ಮತ್ತು 13-3-96 ದಿನಗಳಂದು ಶೃಂಗೇರಿ ಸ್ಥಳೀಯ ತಾಲ್ಲೂಕು ಮಟ್ಟದ ಮೇಳವೂ ಸ್ಕೌಟರ್ಸ್ ಗೈಡರ್ಸ್ ಸಮ್ಮೇಳನವೂ ಜರುಗಿದುವು. ಅಧಿಕ ಸಂಖ್ಯೆಯಲ್ಲಿ ಸ್ಕೌಟ್ ಗೈಡ್‌ಗಳು ಭಾಗವಹಿಸಿದರು. ಸರ್ಕಾರಿ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ರಘುವೀರ್‌ರವರು ಉದ್ಘಾಟಿಸಿದರು. ಸ್ಥಳೀಯ ಸಂಘದ ಗೌರವ ಕಾರ್ಯದರ್ಶಿಗಳಾದ ಶ್ರೀ ಲಕ್ಷ್ಮಣದಾಸ್‌ರವರು ಮೇಳದ ಯಶಸ್ಸಿಗೆ ಕಾರಣರಾದವರಲ್ಲಿ ಮುಖ್ಯರು.

ಶೃಂಗೇರಿ ಸ್ಥಳೀಯ ಸಂಸ್ಥೆಯ ವತಿಯಿಂದ 31-1-96 ರಿಂದ 9-2-96ರವರೆಗೆ ಸ್ಕೌಟ್ ಮಾಸ್ಟರುಗಳ ಮೂಲ ತರಬೇತಿ ಶಿಬಿರವು ನಡೆಯಿತು.

## ತುಮಕೂರು ಜಿಲ್ಲೆ

29-2-96 ರಂದು 200 ಮಂದಿ ಸ್ಕೌಟ್ಸ್, ಗೈಡ್ಸ್ ಮತ್ತು ಸ್ಕೌಟರ್ಸ್, ಗೈಡರ್ಸ್ ಭಾಗವಹಿಸಿದ್ದ ತಾಲ್ಲೂಕು ಮಟ್ಟದ ಮೇಳವು ಸ್ಥಳೀಯ ಕಾರ್ಯದರ್ಶಿ ಶ್ರೀ ಕುಮಾರಾರಾಧ್ಯರವರ ನೇತೃತ್ವದಲ್ಲಿ ನಡೆಯಿತು.

ತುರುವೇಕೆರೆ ತಾಲ್ಲೂಕು ಸಹಾಯಕ ಜಿಲ್ಲಾ ಸ್ಕೌಟ್ ಆಯುಕ್ತ ಹಾಗೂ ಸ್ಥಳೀಯ ಶಿಕ್ಷಣಾಧಿಕಾರಿಗಳಾದ ಶ್ರೀ ಸೋಮಶೇಖರಯ್ಯನವರ ಅಧ್ಯಕ್ಷತೆಯಲ್ಲಿ, ಸ್ಕೌಟ್ ಮಾಸ್ಟರ್ ಶ್ರೀ ಎಸ್. ಲಕ್ಷ್ಮಯ್ಯನವರು ಮೇಳವನ್ನು ಉದ್ಘಾಟಿಸಿದರು. ಪ್ರಾಚಾರ್ಯರಾದ ಶ್ರೀಮತಿ ಮಾಲತಿ, ಸಹಾಯಕ ಜಿಲ್ಲಾ ಆಯುಕ್ತೆ, ಮಧುಗಿರಿ ತಾಲ್ಲೂಕು

ಸಹಾಯಕ ಆಯುಕ್ತ (ಸ್ಕೌಟ್ಸ್) ಶ್ರೀ ಪಿ. ಹುಚ್ಚಯ್ಯನವರು ಸಂಸ್ಥೆಯ ಶಿಸ್ತು ಮತ್ತು ನಿಯಮಗಳ ಬಗ್ಗೆ ಮಾತನಾಡಿದರು. ಸ್ಥಳೀಯ ಖ್ಯಾತ ಸಾಹಿತಿ ಹೊ.ಗ. ಮನೋಹರ್‌ರವರು ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್‌ರವರ ಆದರ್ಶಗಳು ಹಾಗೂ ಶ್ಲಾಘನೀಯ ಕಾರ್ಯದ ಬಗ್ಗೆ ಮಾತನಾಡಿದರು. ಸ್ಕೌಟ್ ಸಂಸ್ಥೆಯನ್ನು ಸ್ಥಾಪಿಸಿ ಮಾನವ ಜನಾಂಗಕ್ಕೆ ಮಾಡಿರುವ ಮಹದುಪಕಾರವನ್ನು ಸ್ಮರಿಸಿದರು.

ನಗರದ ಪ್ರಮುಖ ಬೀದಿಗಳಲ್ಲಿ ಪಥಚಲನೆಯ ಬಳಿಕ ವಿವಿಧ ಕೌಶಲ್ಯ ಸ್ಪರ್ಧೆಗಳು ನಡೆದುವು.

ತುರುವೇಕೆರೆ ತಾಲ್ಲೂಕು ತಹಶೀಲ್ದಾರ್ ಶ್ರೀ ದಾಸಪ್ಪನವರು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಜೀವರತ್ನ ಎಂ. ಬಿಸಿನೀರ್‌ರವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಜಿಲ್ಲಾ ಸಂಘಟನಾ ಆಯುಕ್ತರುಗಳಾದ ಶ್ರೀ ಗುರುಪ್ರಕಾಶ್ ಮತ್ತು ಶ್ರೀಮತಿ ಸಿದ್ದಗಂಗಮ್ಮ ಉಪಸ್ಥಿತರಿದ್ದರು. ಶ್ರೀಮತಿ ಆರಾಧ್ಯರವರ ನೇತೃತ್ವದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದುವು.

## ದಕ್ಷಿಣ ಕನ್ನಡ ಜಿಲ್ಲೆ

3-3-96ರಂದು ಕುಂದಾಪುರ ತಾಲ್ಲೂಕು ಸ್ಕೌಟ್ ಗೈಡ್ ಮೇಳವು ಜರುಗಿತು. 525 ಮಂದಿ ಭಾಗವಹಿಸಿದ್ದರು.

ಕರಕುಶಲ ವಸ್ತು ತಯಾರಿ, ಶಿಬಿರೋಪಕರಣ ತಯಾರಿ, ಗಾಳಿಪಟ ತಯಾರಿ ಹಾಗೂ ಹಾರಿಸುವಿಕೆ, ಮುಖವಾಡ ತಯಾರಿ, ಶುಭಾಶಯ ಪತ್ರ ತಯಾರಿ, ಗೊಂಬೆ ತಯಾರಿ, ಧ್ವಜ ಸ್ಥಂಭ ನಿರ್ಮಾಣ, ಜಾನಪದ ನೃತ್ಯ, ಗುಂಪಿನ ಆಟಗಳು, ಪ್ರಥಮ ಚಿಕಿತ್ಸೆ ಸ್ಪರ್ಧೆ, ಚಿತ್ರಕಲೆ ಮುಂತಾದ ಕಾರ್ಯಕ್ರಮಗಳು ಮೇಳದಲ್ಲಿ ಇದ್ದುವು.

ಬೈಂದೂರು ಕ್ಷೇತ್ರಶಾಸಕ ಶ್ರೀ ಐ. ಎಂ. ಜಯರಾಮಶೆಟ್ಟರ ಅಧ್ಯಕ್ಷತೆಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ರಾಮಾಚಾರ್‌ರವರು ಮೇಳವನ್ನು ಉದ್ಘಾಟಿಸಿದರು. ಶ್ರೀ ಎಸ್. ಅಶೋಕಕುಮಾರ ಶೆಟ್ಟರವರು ಮುಖ್ಯ ಅತಿಥಿಗಳಾಗಿದ್ದರು.

ತಾಲ್ಲೂಕು ಪಂಚಾಯಿತಿ ಸಮಿತಿ ಉಪಾಧ್ಯಕ್ಷ ಶ್ರೀ ಕೆ. ಬಾಲಚಂದ್ರ ಶೆಟ್ಟರವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭವು ನಡೆಯಿತು. ಶ್ರೀ ಸೋಮಶೇಖರ ಶೆಟ್ಟರವರು ಸಮಾರೋಪ ಭಾಷಣ ಮಾಡಿದರು. ಶ್ರೀಯುತರುಗಳಾದ ಹಸನ್‌ಸಾಬ್ ಮತ್ತು ವೆಂಕಟರಮಣ ಹೆಬ್ಬಾರ್ ಅತಿಥಿಗಳಾಗಿದ್ದರು. ಶ್ರೀ ಸಲೋವರ ಕ್ಯಾಸ್ಟ್ರಾರವರು ರಾಜ್ಯಪುರಸ್ಕಾರ ಪ್ರಶಸ್ತಿಗಳನ್ನು ಸ್ಕೌಟು ಗೈಡುಗಳಿಗೆ ವಿತರಿಸಿದರು. ಶ್ರೀ ಅಲ್ಫೋನ್ಸ್ ಲೋಬೋರವರು ಬೈಂದೂರಿನ 'ಬಿಂದು' ಮುಕ್ತ ದಳವನ್ನು ರಾಷ್ಟ್ರಮಟ್ಟದ ಪ್ರಧಾನ ಮಂತ್ರಿಗಳ ಪಾರಿತೋಷಕವನ್ನು ಪಡೆದುದಕ್ಕಾಗಿ ಅಭಿನಂದಿಸಿ ನೆನಪಿನ ಕಾಣಿಕೆ ನೀಡಿದರು. ಸಹಾಯಕ ಶಿಕ್ಷಣಾಧಿಕಾರಿ ಶ್ರೀ ಮಹಾಬಲೇಶ್ವರ ಶೆಟ್ಟರು ರಾಷ್ಟ್ರಪತಿ ಸ್ಕೌಟ್ ಗೈಡ್ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು.

ಸಹಾಯಕ ಜಿಲ್ಲಾ ಆಯುಕ್ತ ಶ್ರೀ ಸದಾಶಿವಭಟ್, ಶ್ರೀ ಕೆ. ಎಸ್. ಮಂಜುನಾಥ್ ಮತ್ತು ಶ್ರೀ ಸಂಪತ್ ಕುಮಾರ್ ಶೆಟ್ಟಿ ಮೇಳದ ಯಶಸ್ಸಿಗೆ ಕಾರಣರಾದರು.

ಪಾಣೆ ಮಂಗಳೂರು ಸ್ಥಳೀಯ ಸಂಸ್ಥೆಯ ವತಿಯಿಂದ 3-3-96 ರಂದು ಸ್ಥಳೀಯ ಸ್ಕೌಟ್ ಗೈಡ್ ಮೇಳವು ನಡೆಯಿತು. ಅಧಿಕ ಸಂಖ್ಯೆಯಲ್ಲಿ ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯವರು ತ್ರೈಮಾಸಿಕ ಸ್ಕೌಟ್ ಗೈಡ್ ಗೆಜೆಟ್ಟನ್ನು ಹೊರಡಿಸುತ್ತಿದ್ದು
ಇದೀಗ 7 ನೇ ಸಂಪುಟಕ್ಕೆ ಕಾಲಿಡಲಿದ್ದಾರೆ. ಇದು ಶ್ಲಾಘನೀಯವಾದುದು, ಅನುಕರಣೀಯವಾದುದು.

### ಬೆಂಗಳೂರು ಉತ್ತರ ಜಿಲ್ಲೆ

ದೂರವಾಣಿ ನಗರ ಸ್ಥಳೀಯ ಸಂಸ್ಥೆಯವರು ಡಿಸೆಂಬರ್ 16 ಮತ್ತು 17, 1995 ರಲ್ಲಿ ಪದಕ ಕಮ್ಮಟ ಶಿಬಿರವನ್ನು ನಡೆಸಿದರು. ಪ್ರದೇಶದ 5 ಶಾಲೆಗಳಿಂದ ಸ್ಕೌಟ್ ಗೈಡುಗಳು ಅಧಿಕ ಸಂಖ್ಯೆಯಲ್ಲಿ ಭಾಗವಹಿಸಿದರೆಂದು ಕಾರ್ಯದರ್ಶಿಗಳಾದ ಶ್ರೀ ಸತೀಶ್‌ರವರು ವರದಿ ಮಾಡಿರುತ್ತಾರೆ. 17-12-95 ರಂದು ಸಹಾಯಕ ಸಂಘಟನಾ ಆಯುಕ್ತ ಶ್ರೀ ಶಿವಕುಮಾರ್ ಅವರು ಪ್ರಮಾಣ ಪತ್ರಗಳನ್ನು ವಿತರಿಸಿದರು. ಅದೇ ಸಂಜೆ ಆಕರ್ಷಕ ಸಾಂಸ್ಕೃತಿಕ ಕಾರ್ಯಕ್ರಮವಿದ್ದಿತು.

### ಬೆಂಗಳೂರು ಗ್ರಾಮಾಂತರ ಜಿಲ್ಲೆ

ದೇವನಹಳ್ಳಿ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ ತಾಲ್ಲೂಕು ಮಟ್ಟದ ಸ್ಕೌಟ್ ಗೈಡ್ ಮೇಳವು 29-3-96 ರಂದು ನಡೆದುದಾಗಿ ತಿಳಿದುಬಂದಿದೆ.

### ಮೈಸೂರು ಗ್ರಾಮಾಂತರ ಜಿಲ್ಲೆ

ಜಿಲ್ಲೆಯ ವಿವಿಧ ಭಾಗಗಳಲ್ಲಿ 22-2-96 ರಂದು ಬೇಡನ್ ಪೋವೆಲ್‌ರವರ ಸ್ಮರಣ ದಿನಾಚರಣೆ ಹಾಗೂ ಮೇಳಗಳನ್ನು ಸಂಘಟಿಸಿದ ವರದಿಗಳು ಬಂದಿವೆ.

ಕೊಳ್ಳೇಗಾಲದ ಸಮಾರಂಭದಲ್ಲಿ 400 ಮಕ್ಕಳು ಭಾಗವಹಿಸಿದ್ದರು. ಪಥಚಲನೆ ಮತ್ತು ವಸ್ತು ಪ್ರದರ್ಶನಗಳು ಸಮಾರಂಭದ ಮುಖ್ಯ ಆಕರ್ಷಣೆಗಳಾಗಿದ್ದವು. ಶ್ರೀಯುತರುಗಳಾದ ಕೆ. ಜಿ. ಮಹಾದೇವಯ್ಯ, ವೆಂಕಟಾಚಲ ಮತ್ತು ಶ್ರೀ ವಿ. ಯಂ. ರಾಮಚಂದ್ರ ಮುಖ್ಯ ಅತಿಥಿಗಳಾಗಿದ್ದರು. ಶ್ರೀಮತಿ ಶೀಲಾ ನಾಗರಾಜ್ ಉದ್ಘಾಟಿಸಿದರು.

ಚಾಮರಾಜ ನಗರದಲ್ಲಿ ನಡೆದ ಸಮಾರಂಭದಲ್ಲಿ ಶ್ರೀ ನಂಜುಂಡಸ್ವಾಮಿ, ಶ್ರೀ ಎಂ. ರಾಮಚಂದ್ರ, ಶ್ರೀಮತಿ ಲಕ್ಷ್ಮಿ ಅಶ್ವಥನಾರಾಯಣ್ ಮತ್ತು ಶ್ರೀ ಮಂಡು ಮಾದಪ್ಪ ಅತಿಥಿಗಳಾಗಿದ್ದರು. ಜಿ. ಆರ್. ಅಶ್ವತ್ಥನಾರಾಯಣ್ ಅಧ್ಯಕ್ಷತೆ ವಹಿಸಿದ್ದರು. 250 ಮಂದಿ ಭಾಗವಹಿಸಿದ್ದರು.

ನಂಜನಗೂಡಿನಲ್ಲಿ ನಡೆದ ಸಮಾರಂಭಕ್ಕೆ ಶ್ರೀ ಬಿ. ವಿ. ಬಾಲಸುಬ್ರಹ್ಮಣ್ಯಂ ಅಧ್ಯಕ್ಷತೆ ವಹಿಸಿದ್ದರು. ಉಪ ವಿಭಾಗಾಧಿಕಾರಿಗಳಾದ ಶ್ರೀ ಭಕ್ತರಾಮೇಗೌಡರು, ಶ್ರೀ ಬಿ. ಎಲ್. ರಾಮಸ್ವಾಮಿ, ಶ್ರೀ ಟಿ. ಎಸ್. ಸಿದ್ದಪ್ಪ ಮತ್ತು ಶ್ರೀಮತಿ ಕೆ. ಸಿ. ಪ್ರೇಮಲತ ಅತಿಥಿಗಳಾಗಿದ್ದರು. ಅಧಿಕ ಸಂಖ್ಯೆಯಲ್ಲಿ ಮಕ್ಕಳು ಭಾಗವಹಿಸಿದ್ದರು ಶ್ರೀ ಎಸ್. ಮಲ್ಲೇಗೌಡರನ್ನು ಸನ್ಮಾನಿಸಲಾಯಿತು.

ದಿನಾಂಕ 30-3-96 ರಂದು ಚಾಮರಾಜನಗರದ ಗುರುಭವನದಲ್ಲಿ ಸ್ಥಳಿಯ ಸಂಸ್ಥೆಯ ಆಶ್ರಯದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್. ಮಲ್ಲೇಗೌಡರಿಗೆ ಮೆಡಲ್ ಆಫ್ ಮೆರಿಟ್ ಪ್ರಶಸ್ತಿ ಪ್ರಧಾನವೂ, ಸ್ಕೌಟ್, ಗೈಡ್, ಕಬ್ ಮತ್ತು ಬುಲ್‌ಬುಲ್ ಮಕ್ಕಳಿಗೆ ಪ್ರಶಸ್ತಿ ಪತ್ರ ವಿತರಣಾ ಸಮಾರಂಭವೂ ಜರುಗಿದವು. ಕಾರ್ಯದರ್ಶಿಗಳಾದ ಶ್ರೀ ಶಿವಪ್ಪನವರು ಎಲ್ಲರನ್ನೂ ಸ್ವಾಗತಿಸಿದರು. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಹಲವಾರು ದಶಕಗಳಿಂದ ಸೇವೆ ಸಲ್ಲಿಸುತ್ತಿರುವ ಶ್ರೀ ಎಸ್. ಮಲ್ಲೇಗೌಡರಿಗೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಲ್. ಎಂ. ನಾಗಲಿಂಗ ಸ್ವಾಮಿಯವರು ರಾಜ್ಯ ಸಂಸ್ಥೆಯವರು ನೀಡಿದ ಮೆಡಲ್ ಆಫ್ ಮೆರಿಟ್ ಪ್ರಶಸ್ತಿ ನೀಡಿ, ಶಾಲು ಹೊದಿಸಿ ಸನ್ಮಾನಿಸಿ ಶುಭ ಕೋರಿದರು.

ರಾಜ್ಯ ತರಬೇತಿ ಕಮೀಷನರ್ (ಸ್ಕೌಟ್ಸ್) ಶ್ರೀ ನಾರಾಯಣಶೆಟ್ಟಿಯವರು ಮುಖ್ಯ ಅಥಿತಿಗಳಾಗಿ ಆಗಮಿಸಿ ರಾಜ್ಯ ಮುಖ್ಯ ಆಯುಕ್ತರ ಪರವಾಗಿ ಮತ್ತು ರಾಜ್ಯ ಸಂಸ್ಥೆಯ ಪರವಾಗಿ ಶುಭ ಕೋರಿದರು. ರಾಜ್ಯ ಪುರಸ್ಕಾರ ಸ್ಕೌಟ್‌ಗಳಿಗೆ ರಾಜ್ಯ ಪುರಸ್ಕಾರ ಸರ್ಟಿಫಿಕೇಟ್ ವಿತರಿಸಿದರು. ಎ.ಡಿ.ಸಿ. ಗೈಡ್ ಶ್ರೀಮತಿ ವಿಜಯ ನಾಗಲಿಂಗಸ್ವಾಮಿ ಯವರು ಗೈಡ್‌ಗಳಿಗೆ ಪ್ರಮಾಣ ಪತ್ರಗಳನ್ನು ವಿತರಿಸಿದರು. ಶ್ರೀ ನಾಗಲಿಂಗಸ್ವಾಮಿಯವರು ಅಧ್ಯಕ್ಷತೆ ವಹಿಸಿದ್ದರು. ಕೊನೆಯಲ್ಲಿ ಶ್ರೀ ಗೋವಿಂದ ಶೆಟ್ಟರು ಎಲ್ಲರನ್ನೂ ವಂದಿಸಿದರು.

ಸಮಾರಂಭದ ನಂತರ ಸ್ಕೌಟರ್, ಗೈಡರ್‌ಗಳ ಸಭೆ ನಡೆಯಿತು ಗಣತಿ, ಪ್ರಗತಿಪರ ಶಿಕ್ಷಣ, 1996-97ನೇ ಸಾಲಿನ ರಾಜ್ಯಮಟ್ಟದ ತರಬೇತಿ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಸೂಕ್ತ ಸಲಹೆ ನೀಡಿದರು. ಶ್ರೀ ಈ. ಶಿವಪ್ಪ ಜಿಲ್ಲಾ ತರಬೇತಿ ಆಯುಕ್ತರು, ಶ್ರೀ ರಾಮಚಂದ್ರ ಜಿಲ್ಲಾ ಸಂಘಟನಾ ಆಯುಕ್ತರು ಮತ್ತು ಶ್ರೀಮತಿ ಕೆ. ಸಿ. ಪ್ರೇಮಲತ ಸಹಾಯಕ ಸಂಘಟನಾ ಆಯುಕ್ತೆ (ಗೈಡ್ಸ್) ಉಪಸ್ಥಿತರಿದ್ದರು.

## ರಾಯಚೂರು ಜಿಲ್ಲೆ

ಗಂಗಾವತಿ ಸ್ಥಳೀಯ ಸಂಸ್ಥೆಯ 18ನೆಯ ವಾರ್ಷಿಕ ಮಹಾಸಭೆಯು 8-4-96 ರಂದು ನಡೆಯಿತು.

ಈವರೆಗೆ 2 ಜಿಲ್ಲಾ ಮಟ್ಟದ ಸ್ಕೌಟ್ ಗೈಡ್ ಮೇಳಗಳು, 14 ತಾಲ್ಲೂಕು ಮಟ್ಟದ ಮೇಳಗಳು, ಅನೇಕ ಸೇವಾ ಶಿಬಿರಗಳು ನಡೆದಿರುವುದು ಶ್ಲಾಘನೀಯವಾಗಿದೆ. 65 ಕ್ಕೂ ಹೆಚ್ಚುಮಂದಿ ಶಿಕ್ಷಣ ಪಡೆದಿರುವ ಸ್ಕೌಟರ್ ಗೈಡರ್‌ಗಳಿದ್ದಾರೆ ಹಾಗೂ 44 ನೋಂದಾಯಿತ ದಳಗಳಿವೆ. ತಮ್ಮದೇ ಆದ ನಿವೇಶನವನ್ನು ಹೊಂದಿದ್ದು ಕಟ್ಟಡ ನಿರ್ಮಾಣಕ್ಕಾಗಿ ಶ್ರಮಿಸುತ್ತಿದ್ದಾರೆ. ಗಂಗಾವತಿ ಸ್ಥಳೀಯ ಸಂಸ್ಥೆಯು ಇನ್ನೂ ಉತ್ತಮವಾಗಿ ಬೆಳೆಯಲೆಂದು ಹಾರೈಸುತ್ತೇವೆ.

ಜಿಲ್ಲೆಯ ಇಬ್ಬರು ಗೈಡ್‌ಗಳು 2-2-96 ರಂದು ಮಾನ್ಯ ರಾಜ್ಯಪಾಲರಿಂದ ರಾಜ್ಯ ಪುರಸ್ಕಾರ್ ಪ್ರಶಸ್ತಿಯನ್ನು ಪಡೆದರು.

ಫೆಬ್ರುವರಿ 21 ರಿಂದ 23 ವರೆಗೆ ಕೊಪ್ಪಳ ತಾಲ್ಲೂಕಿನಲ್ಲಿ ಜಿಲ್ಲಾಮಟ್ಟದ ಮೇಳವನ್ನು ಸಂಘಟಿಸಲಾಗಿದ್ದಿತು. ಜಿಲ್ಲೆಯ 9 ತಾಲ್ಲೂಕುಗಳಿಂದ 900ಕ್ಕೂ ಹೆಚ್ಚು ಸ್ಕೌಟ್ಸ್, ಗೈಡ್ಸ್, ಸ್ಕೌಟರ್ಸ್ ಮತ್ತು ಗೈಡರ್ಸ್ ಭಾಗವಹಿಸಿದ್ದರು.

24-2-96ರಂದು ಗಂಗಾವತಿಯಲ್ಲಿ, ಬೇಡನ್ ಪೊವೆಲ್ಲರ ಜನ್ಮದಿನ ಹಾಗೂ ಲೇಡಿ ಬೇಡನ್ ಪೊವೆಲ್ಲರ ಚಿಂತನಾ ದಿನವನ್ನು ಆಚರಿಸಲಾಯಿತು. ಆಚರಣೆಯ ಅಂಗವಾಗಿ, ಸರ್ಕಾರಿ ಆಸ್ಪತ್ರೆಯಲ್ಲಿ 100 ರೋಗಿಗಳಿಗೆ ಹಾಲು ಹಣ್ಣು ವಿತರಿಸಲಾಯಿತು.

## ಶಿವಮೊಗ್ಗ ಜಿಲ್ಲೆ

ಭದ್ರಾವತಿ ಸ್ಥಳೀಯ ಸಂಸ್ಥೆಯ ವತಿಯಿಂದ 27 ರಿಂದ 29-2-96ವರೆಗೆ ಸಂಸ್ಥಾಪಕರ ದಿನಾಚರಣೆ ಹಾಗೂ ಸ್ಥಳೀಯ ಮಟ್ಟದ ಮೇಳವನ್ನು ಏರ್ಪಡಿಸಲಾಗಿದ್ದಿತು.

ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಸ್ಕೌಟ್ ಭವನದಲ್ಲಿ 22-2-96 ರಂದು ಬಿ.ಪಿ.ರವರ ಜನ್ಮದಿನವನ್ನು ಆಚರಿಸಲಾಯಿತು ಸರ್ವಧರ್ಮ ಪ್ರಾರ್ಥನೆ ಹಾಗೂ ಬಿ.ಪಿ.ಯವರ ಜೀವನ ಚರಿತ್ರೆಯ ಬಗ್ಗೆ ಆಶುಭಾಷಣ ಸ್ಪರ್ಧೆಗಳಿದ್ದವು. 120 ಕ್ಕೂ ಹೆಚ್ಚು ಮಕ್ಕಳೂ ಸಂಸ್ಥೆಯ ಪದಾಧಿಕಾರಿಗಳೂ ಭಾಗವಹಿಸಿದ್ದರು.

ಚನ್ನಗಿರಿ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ ತಾಲ್ಲೂಕು ಮಟ್ಟದ ಸ್ಕೌಟ್ ಗೈಡ್ ಮೇಳವು 23 ಮತ್ತು 24-2-96 ರಂದು ಜರುಗಿತು ಅಧಿಕ ಸಂಖ್ಯೆಯಲ್ಲಿ ಮಕ್ಕಳು ಭಾಗವಹಿಸಿದ್ದರು. ಸರ್ವಧರ್ಮ ಪ್ರಾರ್ಥನೆ, ಪಥಚಲನೆ, ಬಿ.ಪಿ. ಜೀವನ ಚರಿತ್ರೆ ಕೌಶಲ್ಯ ಶಿಕ್ಷಣ ಶಿಬಿರಾಗ್ನಿ ಇತ್ಯಾದಿ ಕಾಯಕ್ರಮಗಳು ಆಕರ್ಷಕವಾಗಿದ್ದುವು.

ಹೊನ್ನಾಳಿ ತಾಲ್ಲೂಕು ಮಟ್ಟದ ಸ್ಕೌಟ್ ಗೈಡ್ ಮೇಳವು 23/24-2-96 ದಿನಗಳಂದು ನಡೆಯಿತು 250ಕ್ಕೂ ಹೆಚ್ಚು ಮಕ್ಕಳು ಭಾಗವಹಿಸಿದ್ದರು. ಪಥಚಲನೆ, ಸರ್ವಧರ್ಮ ಪಾರ್ಥನೆ, ಬಿ.ಪಿ. ಜೀವನ ಚರಿತ್ರೆ ಶಿಬಿರಾಗ್ನಿ, ಕೌಶಲ್ಯ ಶಿಕ್ಷಣ ಇತ್ಯಾದಿ ಕಾರ್ಯಕ್ರಮಗಳು ಆಕರ್ಷಕವಾಗಿದ್ದವು.

ಶಿಕಾರಿಪುರ ತಾಲ್ಲೂಕು ಮಟ್ಟದ ಮೆಳವು 28-2-96 ರಂದು ಅಂಜನಾಪುರದಲ್ಲಿ ನಡೆಯಿತು. 250ಕ್ಕೂ ಹೆಚ್ಚು ಸ್ಕೌಟ್ ಗೈಡ್‌ಗಳು ಭಾಗವಹಿಸಿದರು. ಪಥಚಲನೆ, ಸಾಂಸ್ಕೃತಿಕ ಚಟುವಟಿಕೆಗಳು ಇತ್ಯಾದಿ ಆಕರ್ಷಕವಾಗಿದ್ದುವು.

**ಹಾಸನ ಜಿಲ್ಲೆ**

ಹಾಸನ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ 22-2-96 ರಂದು ತಾಲ್ಲೂಕು ಮೇಳ ಹಾಗೂ ಬಿ.ಪಿ. ಜನ್ಮ ದಿನಾಚರಣೆ ಆಚರಿಸಲಾಯಿತು. 350ಕ್ಕೂ ಹೆಚ್ಚು ಸ್ಕೌಟ್ಸ್ ಗೈಡ್ಸ್, ಸ್ಕೌಟರ್ಸ್ ಗೈಡರ್ಸ್ ಭಾಗವಹಿಸಿದ್ದರು.

ತಾಲ್ಲೂಕು ಪಂಚಾಯಿತಿ ಅಧ್ಯಕ್ಷರಾದ ಶ್ರೀ ಟಿ. ಎಸ್. ಗಿರಿಜಪ್ಪನವರು ಅಧ್ಯಕ್ಷತೆಯಲ್ಲಿ, ಶ್ರೀ ಸಿ. ಯಂ. ಚಂದ್ರಶೇಖರ್ ಉದ್ಘಾಟಿಸಿದರು. ಶ್ರೀ ಬಿ. ಶಾಂತರಾಜು ಮುಖ್ಯ ಅತಿಥಿಗಳಾಗಿದ್ದರು.

ಶ್ರೀಮತಿ ವೈ. ಎಂ. ನೂರ್‌ಜಾನ್ ಬಿ, ಮುಕ್ತಾಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು, ಶ್ರೀ ಷಡಕ್ಷರಪ್ಪ ಮುಖ್ಯ ಅತಿಥಿಗಳಾಗಿದ್ದರು.

ವಿವಿಧ ಸ್ಪರ್ಧೆಗಳು, ಸಾಂಸ್ಕೃತಿಕ ಕಾರ್ಯಕ್ರಮ ಬಿ.ಪಿ. ಜೀವನ ಚರಿತ್ರೆ ಮುಖ್ಯ ಕಾರ್ಯಕ್ರಮಗಳಾಗಿದ್ದುವು.

---

ಈ ಕೆಳಕಂಡ ಗೈಡರುಗಳು ಹಿಮಾಲಯಾ ವುಡ್ ಬ್ಯಾಡ್ಜ್ ಪಾರ್ಚ್‌ಮೆಂಟ್‌ಅನ್ನು ಪಡೆದಿರುತ್ತಾರೆ. ಅವರುಗಳನ್ನು ಅಭಿನಂದಿಸುತ್ತೇವೆ ಹಾಗೂ ಹೆಚ್ಚಿನ ಗುಣಾತ್ಮಕ ಸೇವೆಯನ್ನು ಅವರುಗಳಿಂದ ಆಶಿಸುತ್ತೇವೆ.

| | | |
|---|---|---|
| | | ಪಾರ್ಚಮೆಂಟ್ ಸಂಖ್ಯೆ |
| 1) | ಸಿಸ್ಟರ್ ನೊಯೆಲ್ಲಾ, ಫ್ಲಾಕ್ ಲೀಡರ್, ಬೆಂಗಳೂರು ಉತ್ತರ ಜಿಲ್ಲೆ | ಕೆ.ಎ. 44 ತಾ. 3-2-96 |
| 2) | ಶ್ರೀಮತಿ ಹೆಚ್. ಜಿ. ಕಾಂಚನಮಾಲ, ಗೈಡ್ ಕ್ಯಾಪ್ಟನ್, ಹಾಸನ ಜಿಲ್ಲೆ | ಕೆ.ಎ. 97 ತಾ. 3-2-96 |
| 3) | ಶ್ರೀಮತಿ ಕಾತ್ಯಾಯಿನಿ ದೇವಿ, ಗೈಡ್ ಕ್ಯಾಪ್ಟನ್, ರಾಯಚೂರು ಜಿಲ್ಲೆ | ಕೆ.ಎ. 98 ತಾ. 3-2-96 |

(ಸಹಿ/-) ಜಂಟಿ ರಾಜ್ಯ ಕಾರ್ಯದರ್ಶಿ

# ಆಟದ ಬಯಲು

## (ಸ್ಕೌಟಿಂಗ್ ಫಾರ್ ಬಾಯ್ಸ್ ಪುಸ್ತಕದಿಂದ ಆಯ್ದ ಆಟಗಳ ಸಂಕಲನ)

**ಸಮವಸ್ತ್ರಧಾರಣಾ ಮಜಲು**

ಪೆಟ್ರೋಲ್‌ನ ಎಲ್ಲಾ ಸದಸ್ಯರೂ ಒಬ್ಬರ ಹಿಂದೊಬ್ಬರು ನಿಂತಿರುತ್ತಾರೆ. ಪೆಟ್ರೋಲುಗಳು ಬೇರೆ ಬೇರೆಯಾಗಿ ನಿಂತಿರುತ್ತವೆ. ಅವರಿಂದ ನಿಗದಿತ ದೂರದಲ್ಲಿ ಸಮವಸ್ತ್ರದ ವಸ್ತುಗಳನ್ನು ಇಟ್ಟಿರುತ್ತದೆ. ಶೀಟಿ ಊದಿದ ಕೂಡಲೇ, ಪೆಟ್ರೋಲುವಾರು ಆ ನಿಗದಿತ ಸ್ಥಳಕ್ಕೆ ಓಡಬೇಕು. ಸಮವಸ್ತ್ರವನ್ನು ಸರಿಯಾದ ರೀತಿಯಲ್ಲಿ ಧರಿಸಬೇಕು. ತಮ್ಮ ಸ್ಥಳಕ್ಕೆ ಎಲ್ಲರೂ ಒಟ್ಟುಗೂಡಿ ವಾಪಸ್ಸಾಗಬೇಕು. ಸ್ವಸ್ಥಾನಸೇರಿ ಮೊದಲಿನಂತೆ ನಿಂತಕೂಡಲೇ ಪೆಟ್ರೋಲ್ ಕೂಗು ಕೊಡಬೇಕು. ಪೆಟ್ರೋಲ್ ಕೂಗು ಕೊಟ್ಟಕೂಡಲೇ ಸಾವಧಾನ್ ನಿಲ್ಲಬೇಕು.

| | | | |
|---|---|---|---|
| ಮಾಪನ : | 1. ಅವಧಿ | : | 1 ರಿಂದ 4 ಅಂಕಗಳು (ಮೊದಲು ನಿಂತು ಪೆಟ್ರೋಲ್ ಕೂಗು ಕೊಟ್ಟವರಿಗೆ—4 ಅಂಕಗಳು) |
| | 2. ಸರಿಯಾದ ರೀತಿಯ ಧಾರಣೆ | : | ಬೆರ್ರೆ, ಸ್ಕಾರ್ಫ್, ಷರ್ಟು, ಪ್ಯಾಂಟು (ಗುಂಡಿಗಳನ್ನು /ಜಿಪ್ ಹಾಕಿರುವುದು, ಸರಿಯಾಗಿ ಟಕ್ ಮಾಡಿರುವುದು, ಪದಕಧಾರಣೆ ಇತ್ಯಾದಿ), ಬೆಲ್ಟು, ಸಾಕ್ಸು, ಷೂಸ್ (ಪಾಲಿಷ್ ಮಾಡಿರುವುದು, ಲೇಸ್ ಕಟ್ಟಿರುವುದು) 12 ಅಂಕಗಳು. |
| | 3. ಸ್ವಚ್ಛತೆ | : | 1 ಅಂಕಗಳು. |
| | 4. ಒಗ್ಗಟ್ಟು | : | 1 ಅಂಕಗಳು. |
| | 5. ಚಾಲೂಕುತನ | : | 2 ಅಂಕಗಳು. |
| | | ಒಟ್ಟು | 20 ಅಂಕಗಳು. |

ಹೆಚ್ಚು ಅಂಕಗಳನ್ನು ಗಳಿಸಿದ ಪೆಟ್ರೋಲ್ ಗೆದ್ದಂತೆ.

**ಸೂಚನೆ :** ಈ ಆಟವನ್ನು ಆಡಿಸುವಾಗ, ಕಾಲಾವಕಾಶವಿದ್ದರೆ ಪೆಟ್ರೋಲ್‌ನ ಒಬ್ಬೊಬ್ಬರನ್ನೇ ಓಡಿಸಬಹುದು. - ಮೊದಲನೆಯವರು ವಾಪಸಾದ ಮೇಲೆ ಎರಡನೆಯವರು ಹೀಗೆ.

**ಒಸಗೆಯ ಓಟ**

ದಳವು ವೃತ್ತಾಕಾರದಲ್ಲಿ ನಿಲ್ಲುತ್ತದೆ. ನಂಬರ್ ಹೇಳಿಸಲಾಗುತ್ತದೆ. ಸ್ಕೌಟ್ ಮಾಸ್ಟರು 2 ಅಂಕಗಳನ್ನು ಹೇಳಿ, ಗೋ ಎಂದ ಕೂಡಲೇ ಆ ಇಬ್ಬರೂ ವೃತ್ತದ ಹೊರಗೆ ವಿವಿಧ ದಿಕ್ಕುಗಳಲ್ಲಿ ಓಡುತ್ತಾರೆ. ಮಾರ್ಗ ಮಧ್ಯೆ ಭೇಟಿಯಾಗಿ, ಸಾವಧಾನ್‌ನಲ್ಲಿ ವಂದನೆಮಾಡಿ, ಎಡಗೈನಲ್ಲಿ ಹಸ್ತಲಾಘವ ನೀಡಬೇಕು. ಹೇಗಿದ್ದೀಯೆ ? ವಿಚಾರಿಸಬೇಕು ಹೇಗಿದ್ದಾನೆಂಬುದನ್ನು ಉತ್ತರಿಸಬೇಕು, ಮತ್ತೆ ಹಸ್ತಲಾಘವ ನೀಡಿ ವಂದಿಸಬೇಕು. ತಮ್ಮ ಸ್ಥಳಕ್ಕೆ ಓಡಿಸೇರಿಕೊಳ್ಳಬೇಕು. ಈಗ ಸ್ಕೌಟ್ ಮಾಸ್ಟರ್ ಮತ್ತೆರಡು ಸಂಖ್ಯೆಗಳನ್ನು ಹೇಳುತ್ತಾರೆ. ಆಟವು ಮುಂದುವರಿಯುತ್ತದೆ.

ಹಸ್ತಲಾಘವನ್ನು ನೀಡುವುದನ್ನೂ, ವಂದಿಸುವುದನ್ನೂ ತಿದ್ದಲು ಸ್ಕೌಟ್ ಮಾಸ್ಟರಿಗೆ ಇದೊಂದು ಸದವಕಾಶವಾಗಿರುತ್ತದೆ.

(ಈ ಆಟಗಳು ಸ್ಕೌಟಿಂಗ್ ಫಾರ್ ಬಾಯ್ಸ್ ಪುಸ್ತಕದಲ್ಲಿರುವುದಿಲ್ಲ, ಆದರೆ ಉದಂತ 3 ಕ್ಕೆ ಪೂರಕವಾಗಿ ಈ ಆಟಗಳನ್ನು ಆಡಿಸಬಹುದು.)

## ಸಂದೇಶ ವಾಹನ

"ಧಾಳಿಗೊಳಪಟ್ಟ ಪ್ರದೇಶ"ಕ್ಕೆ ಸಂದೇಶವನ್ನು ತೆಗೆದುಕೊಂಡು ಹೋಗಲು, ಒಬ್ಬ ಸ್ಕೌಟನ್ನು ಆರಿಸಿಕೊಳ್ಳುವುದು. ಧಾಳಿಗೊಳಗಾದ ಪ್ರದೇಶವು ನಿಜವಾದ ಗ್ರಾಮಪ್ರದೇಶ ಅಥವಾ ಹೊಲ ಅಥವಾ ವನಪ್ರದೇಶ ಅಥವಾ ಮನೆ ಅಥವಾ ಯಾರಾದರೊಬ್ಬರನ್ನು ನಿಗದಿತ ಸ್ಥಳದಲ್ಲಿ ನಿಲ್ಲಿಸಬಹುದು. ಸಂದೇಶವನ್ನೊಯ್ಯುವವನು, ಕನಿಷ್ಠ 2 ಅಡಿ ಉದ್ದದ ಬಣ್ಣದ ಬಟ್ಟೆ ಅಥವಾ ರಿಬ್ಬನ್ನನ್ನು ಭುಜಕ್ಕೆ ಪಿನ್ ಮಾಡಿಕೊಂಡಿರಬೇಕು. ಈ ಬಣ್ಣದ ರಿಬ್ಬನ್/ಬಟ್ಟೆ ಅದರ ಜಾಗದಲ್ಲಿ ಇದ್ದುಕೊಂಡೇ ಅವನು ಗುರಿಯನ್ನು ಮುಟ್ಟಬೇಕು.

ಧಾಳಿಯಿಟ್ಟಿರುವ ಶತ್ರುಗಳು ಅವನು ಗುರಿಯನ್ನು ಮುಟ್ಟಲಾಗದಂತೆ ತಡೆಯಬೇಕು. ಆದರೆ ರಕ್ಷಕರು ಇರುವ ಪ್ರದೇಶಕ್ಕೆ (ಧಾಳಿಗೊಳಪಟ್ಟ ಪ್ರದೇಶದ ಕೇಂದ್ರದಿಂದ 300 ಗಜ ಸುತ್ತಳತೆಯೊಳಗೆ) ಶತ್ರುಗಳು ಹೋಗುವಂತಿಲ್ಲ. (ಪ್ರದೇಶದ ಎಲ್ಲೆಯನ್ನು ಮೊದಲೇ ನಿಗದಿಪಡಿಸಿರಬೇಕು.) ರಕ್ಷಿತ ಪ್ರದೇಶದ ಎಲ್ಲೆಯೊಳಗೆ ಬಂದ ಶತ್ರುಗಳನ್ನು ರಕ್ಷಕರು ಕೂಡಲೇ ಹಿಡಿಯಬಹುದು ಅಥವಾ ನಿರ್ಣಾಯಕನು ಹೆಸರಿಸಿ ಅವರನ್ನು ಆಟದಿಂದ ಹೊರಗೆ ಹಾಕಬಹುದು.

ಸಂದೇಶ ವಾಹಕನು ನಿಗದಿತ ವೇಳೆಯಲ್ಲಿ ನಿಗದಿತ ಸ್ಥಳದಿಂದ ಹೊರಟು, ನಿಗದಿತ ದಿಕ್ಕಿನಲ್ಲಿ ಮುಂದುವರೆಯುತ್ತಾನೆ. ಧಾಳಿಕೋರರಿಗೆ ಅವನು ಹೊರಟದ್ದನ್ನು ನೋಡಲಾಗುವುದಿಲ್ಲವಾದರೂ, ಅವನು ಗುರಿಮುಟ್ಟದಂತೆ ತಡೆಯಲು ಏನು ಬೇಕಾದರೂ ಮಾಡಬಹುದು. ಅವನು ಭುಜಕ್ಕೆ ಪಿನ್ ಮಾಡಿಕೊಂಡಿರುವ ಬಣ್ಣದ ರಿಬ್ಬನ್/ಪಟ್ಟಿಯನ್ನು ತೆಗೆದರೆ ಮಾತ್ರ ಅವನನ್ನು ಹಿಡಿದಂತೆ. ಅವನು ಹೊರಡುವ ಸ್ಥಳಕ್ಕೂ ಸೇರಬೇಕಾದ ಸ್ಥಳಕ್ಕೂ ಒಂದು ಮೈಲಿ ಅಂತರವಿರಬೇಕು.

ಈ ಆಟವನ್ನು ನಗರಪ್ರದೇಶದಲ್ಲೂ ಆಡಬಹುದು. ಹೊರಡುವ, ಸೇರುವ ಸ್ಥಳಗಳಿಗೆ ಎರಡು ಮನೆಗಳನ್ನು ಆರಿಸಿದರಾಯಿತು. ಸಂದೇಶವಾಹಕನು ಹೆಣ್ಣು ವೇಷವನ್ನು ಬಿಟ್ಟು ಯಾವುದೇ ವೇಷವನ್ನು ಬೇಕಾದರೂ ಧರಿಸಬಹುದು. ಆದರೆ ಬಣ್ಣದ ರಿಬ್ಬನ್/ಪಟ್ಟಿಯನ್ನು ಮಾತ್ರ ಭುಜದಲ್ಲಿ ಧರಿಸಿರಬೇಕು.

—ಉದಂತ 7ರಿಂದ ಆರಿಸಿದ್ದು

## ಸ್ಕೌಟಿಂಗ್ ನಡಿಗೆ

ನಿರ್ಣಯಕಾರರು 3 ಬಾಲಕರನ್ನು ಅಥವಾ 3 ಗುಂಪುಗಳನ್ನು ಬೇರೆಬೇರೆಯಾಗಿ ನಿಲ್ಲಿಸುತ್ತಾರೆ. ಪ್ರತಿ ಗುಂಪೂ ಆದಷ್ಟೂ ಬೇರೆ ಬೇರೆ ರೀತಿಯಲ್ಲಿ ಬಟ್ಟೆಗಳನ್ನು ಧರಿಸಬೇಕು. ಬೇರೆ ಬೇರೆ ವಸ್ತುಗಳನ್ನು, (ಕಾಗದ, ದೊಣ್ಣೆ, ಕಟ್ಟು/ಮೂಟೆ ಇತ್ಯಾದಿ) ಹೊರಟ ಸ್ಥಳದಿಂದ 300 ರಿಂದ 1200 ಗಜಗಳ ಅಂತರದಲ್ಲಿ ಹಿಡಿದು ನಿಲ್ಲುತ್ತಾರೆ. ಆಸುಪಾಸಿನಲ್ಲಿ ಇತರ ಜನರಿದ್ದರೆ, ಈ ಗುಂಪುಗಳನ್ನು ಮಂಡಿಯೂರಿ ಕುಳಿತುಕೊಳ್ಳಲು ಹೇಳಬೇಕು. ನಿರ್ಣಯಕಾರರು, ಈ ಸ್ಪರ್ಧಿಗಳು ಓಡಲು ಸುಮಾರು 2 ಕಿ.ಮೀ. ದೂರದ ವೃತ್ತಾಕಾರದಲ್ಲಿ 3 ಮುಖ್ಯ ಗುರುತುಗಳನ್ನು ತೋರಿಸಿ, ಹಾದಿಯನ್ನು ನಿಗದಿಪಡಿಸುತ್ತಾರೆ. ಸಾಧ್ಯವಾದರೆ ಅಲ್ಲಲ್ಲಿ ಎಗರುವ/ದಾಟುವ ಸ್ಥಳಗಳನ್ನೂ ತೋರಿಸುತ್ತಾರೆ.

ಸ್ಕೌಟರು/ಗೈಡರುಗಳಿಗೆ ಸೂಚನೆ : ನಿಮ್ಮ ದಳಗಳಲ್ಲಿ ಸ್ಕೌಟು/ಗೈಡುಗಳಿಗೆ ಆಟಗಳನ್ನು ಆಡಿಸುತ್ತೀರಿ. ಹಾಗೆ ಆಡಿಸಿದ ಆಟಗಳಲ್ಲಿ ನಿಮ್ಮ ಮಕ್ಕಳಿಗೆ ಹೆಚ್ಚು ರುಚಿಸಿದ ಆಟಗಳನ್ನು ಕಳುಹಿಸಿ ಕೊಡಿ. ಅವುಗಳಲ್ಲಿ ಆಯ್ಕೆಮಾಡಿ ಪ್ರಕಟಿಸುವ ಉದ್ದೇಶವಿದೆ.

ಹೊರಟ ಕೂಡಲೇ ಸ್ಪರ್ಧಿಗಳು ಓಡುತ್ತಾ ಮೊದಲನೇ ಸ್ಥಳವನ್ನು ಮುಟ್ಟುತ್ತಾರೆ, ಅಲ್ಲಿ ನಿರ್ಣಯಕಾರರು, ಸ್ಪರ್ಧಿಗಳು ಶ್ರುತ ಪಡಿಸಿಕೊಳ್ಳಬೇಕಾದ (ರಿಪೋರ್ಟ್) ಗುಂಪಿನ ಕಡೆಯ ದಿಕ್ಕನ್ನು ತಿಳಿಸುತ್ತಾರೆ. ಪ್ರತಿಯೊಬ್ಬ ಸ್ಪರ್ಧಿಯೂ, ಆ ಗುಂಪನ್ನು ಕಂಡ ಕೂಡಲೇ :

1. ಗುಂಪಿನಲ್ಲಿ ಎಷ್ಟು ಜನರಿದ್ದಾರೆ ?
2. ಬಟ್ಟೆಯನ್ನು ಧರಿಸಿರುವ ರೀತಿ, ರಂಗು ಇತ್ಯಾದಿ ಅಥವಾ ಬೇರೆ ಮಾಡಿ ಹೇಳುವ ಇತರ ಅಂಶಗಳು ?
3. ಅವರಿರುವ ಜಾಗದ ಭೂ ಮೇಲ್ಮೈನ ಹೆಗ್ಗುರುತು ?
4. ತಮ್ಮ ಸ್ಥಳದಿಂದ ಅಂದಾಜು ದೂರ ?

ಇವುಗಳನ್ನು ವರದಿ ಮಾಡಬೇಕು.

ಆ ಬಳಿಕ ಮುಂದಿನ ಸ್ಥಳಕ್ಕೆ ಓಡಬೇಕು. ಅಲ್ಲಿಯೂ ಹೀಗೆಯೇ. ಕೊನೆಗೆ ಪೂರ್ಣ ವರದಿಯೊಡನೆ ಗೆಲುವು ಸ್ಥಾನಕ್ಕೆ ಓಡುತ್ತಾರೆ.

ಮಾಪನ : ಪ್ರತಿ ಗುಂಪಿನ ಸರಿಯಾದ ಪೂರ್ಣವಾದ ವರದಿಗೆ 5 ಅಂಕಗಳು ಹಾಗೆ 3 ಗುಂಪುಗಳಿಗೆ ಒಟ್ಟು 15 ಅಂಕಗಳು.

ಗೆಲುವು ತಾಣದಲ್ಲಿ ಮೊದಲ ಬಾಲಕನ ವರದಿ ಒಪ್ಪಿಸಿದಾಗಿನಿಂದ, ವಿಳಂಬವಾಗಿ ಬಂದ ಪ್ರತಿ 10 ಸೆಕೆಂಡಿಗೂ 1 ಅಂಕವನ್ನು ಕಳೆಯಲಾಗುತ್ತದೆ. ಬಿಟ್ಟು ಹೋದ ಅಥವಾ ತಪ್ಪಾದ ಪ್ರತಿ ಅಂಶಕ್ಕೂ $\frac{1}{2}$ ಅಂಕವನ್ನು ಕಳೆಯಲಾಗುತ್ತದೆ.

ಹೆಚ್ಚು ಅಂಕಗಳಿಸಿದವರು ಗೆದ್ದಂತೆ. —ಉದಂತ 8 ರಿಂದ ಆರಿಸಿದ್ದು

## ನಮ್ಮ ಪತ್ರಿಕೆಯಲ್ಲಿನ ಪ್ರಕಟನೆಯ ಬಗ್ಗೆ ಸ್ಪಂದನೆ

ದಕ್ಷಿಣ ರೈಲ್ವೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ, ಮೈಸೂರು ಜಿಲ್ಲಾ ಸಂಸ್ಥೆಯ ಸಾಮ್ರಾಟ್ ಸ್ಕೌಟ್ ಗ್ರೂಪ್‌ನವರು— ಈ ರೀತಿ ಸ್ಪಂದಿಸುತ್ತಾರೆ.

"...........ತಮ್ಮ ಪತ್ರಿಕೆಯಾದ ಕರ್ನಾಟಕ ಸ್ಕೌಟ್ ಮತ್ತು ಗೈಡ್"ನ ಅಕ್ಟೋಬರ್–ಡಿಸೆಂಬರ್ ಪತ್ರಿಕೆ ಪುಟ ಸಂ. 20ರಲ್ಲಿ ನೇತ್ರದಾನ ಜಾಗೃತಿ ಕಾರ್ಯಕ್ರಮದ ಬಗ್ಗೆ ತುಂಬಾ ಅಚ್ಚುಕಟ್ಟಾಗಿ ಪ್ರಕಟಿಸಿದ್ದೀರಿ, ಅದಕ್ಕಾಗಿ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಈ ರಾಷ್ಟ್ರೀಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ನಮ್ಮ ಸಂಸ್ಥೆಯು ನಿರ್ಧರಿಸಿ, ಶ್ರೀ ಕೃಷ್ಣಾ ರಾಜೇಂದ್ರ ಆಸ್ಪತ್ರೆ, ಮೈಸೂರಿನ ನೇತ್ರ ಭಂಡಾರ, ಕಣ್ಣಿನ ವಿಭಾಗದಲ್ಲಿ ಸಂಪರ್ಕಿಸಿ, ನೇತ್ರ ದಾನದ ಬಗ್ಗೆ ಕೆಲವು ಮಾಹಿತಿಗಳನ್ನು ಪಡೆದಿದ್ದೇವೆ. ತಾವು ಪ್ರಕಟಿಸುವ ಪತ್ರಿಕೆಯನ್ನು ಈ ಸಂಸ್ಥೆ ತರಿಸಿಕೊಳ್ಳುತದೆ. ಅದರಿಂದ ಈ ಮಹತ್ತರ ವಿಷಯವು ನಮಗೆ ತಿಳಿಯಿತು. ಶೀಘ್ರದಲ್ಲೇ ಮುಂದಿನ ವರದಿಯನ್ನು ಕಳುಹಿಸುತ್ತೇವೆ."

ಸಾಮ್ರಾಟ್ ಸ್ಕೌಟ್ ಗ್ರೂಪ್‌ನವರನ್ನು ಈ ಬಗ್ಗೆ ಅಭಿನಂದಿಸಿ ಯಶಸ್ಸು ಕೋರುತ್ತೇವೆ, ಇದೇ ರೀತಿ ನೇತ್ರದಾನ ಜಾಗೃತಿ ಆಂದೋಳನಕ್ಕೆ ಧುಮುಕಲಿರುವ ಇತರ ದಳಗಳಿಂದ ವರದಿಗಳನ್ನು ಕೋರುತ್ತೇವೆ.

# Tips to Unit Leaders

By : S. PAULRAJ, B.A., B.Ed.,
LT (S), DTC (S), K.G.F.

*(Contd. from Previous issue)*

## The Meeting Place :

**Out Doors :** The outdoor programme of the troop begins just outside the meeting room door. Get those youngsters outdoors for evening meeting if you can, If not for the whole meeting, atleast for part of it. City troops may meet in a park or Church compound, Temple vicinity or vacant plot or school yard for the complete meeting, or the meeting may start and end indoors, but with the main feature as outdoor treasure hunt. If your troop is located in a small Town you can plan to get entirely out of town for evenings outdoor work and fun, Patrol suppers can be part of the programme and you can wind up with a "CAMP FIRE", a common game in the dark or orientation by the stars.

The Chapter on hiking will give you number of programmes-suggestions that are applicable to the outdoor type of meetings.

**Indoors :** A number of Troops are lucky enough to have their own Troop room decorated in a scouting manner, with a corner for each patrol.

Often troops have to meet in rooms used by other groups during the week. church halls, sunday school rooms, club rooms. With very little effort you can give that kind of room a scout atmosphere by hanging charts, pictures, banners, maps, Scouting in pictures on the walls, to be taken down and stored between meetings, Here patrol Screens can take the place of permanent patrol corners.

Whether you have your own room or not, you need some place to keep troop records and equipment used for the meetings, such as flags, ropes, staves, signal devices, compass, First Aid materials, cooking vessels, poineering materials and so on.

An artificial campfire will prove a great asset.

The activities of the meeting will be influenced to a great extent by the type of place you have. If the meeting room is large or big enough games will have to be comparatively quiet but vigorons and scout craft projects that need plenty of elbow room can be organised.

## What goes in to the Troop Meeting

In determining the activities of your troop meetings, keep in mind that they must not only fit the facilities you have but, what is even more important, they must fit your troop. your patrols, your boys.

So early in the game, have a session with your patrol Leaders Council–COH for the express purpose of living up your troop meetings to cover the great variety of possible activities listed below. Pick those that best suit your troop. Then arrange them into a skeleton outline on which you can base your future meetings.

## Ingredients of the Troop Meeting

**Scoutcraft Instructions :** By this we mean the instructions of some Scout Craft that will help each scout become better prepared in planning the programme of your troop around a monthly theme, this presentation will, ofcourse, cover the skill you are concentrating on at the time. This part of the meeting may be putup in several ways.

**Talk** : A Short and Snappy one, by a qualified speaker on the theme of the month.

**Pictures** : A talk will be greatly strengthened by the use of a Black Board, Charts, Flip Charts, or large-sized pictures, Filmstrips, or slides are even better occasionally, use one of the special scout craft Training films that are available at Scout Headquarters,

**Demonstration** : Many subjects are best treated in the form of a demonstration with the actual materials on Hand, "Packing Your Pack" "Making a Camp bed" and so on,

**Dramatization** : A number of skills adopt themselves easily to Dramatization. Safety and First aid are main among others,

**Scout Craft Practice** : The actual use during the troop meeting of some scout knowledge for practice in the subject, or for testing, This too will be based on the "Theme of the month",

**Scout Craft Games** : Involving scout skills, quickness of action or thought, observation and deduction use of the senses-with the patrols as the teams.

**Scrout Craft-Projects** : Each patrol showing its ability in a skill by completing a project based on it, Such projects lend themselves especially well to contests between the patrols,

**Scout Formations** : Just enough practice in the use of silent scout hand signals to keep the boys alert and to move the patrols quickly into various formations for games and other activities,

**Fun** : Different programme features that will add variety to the meeting and will help build troop spirit and enthusiasm.

**Fitness Games** : With Emphasis on physical action and Fun Practice B. P. Excercises everyday,

*(to be Contd.)*

# Coming International, National & State Events and Training Courses During 1996

| Name of the Course/Event | Place | Dates |
|---|---|---|
| **International Level** | | |
| G.S.P. National Training Trek | Philippines | May 1 to 22 |
| Cabaran '96 | Malaysia | June 2 to 7 |
| 16th National Jamboree | Denmark | July 1 to 9 |
| Indonesian National Jamboree | Jakarta | June 26—July 4 |
| 6th World Youth Forum, Moss | Norway | July 2 to 5 |
| 34th World Scout Conference, Oslo | Norway | July 12 to 18 |
| Jabulan '96 | South Africa | July 14 to 19 |
| 10th World Moot Mondial | Sweden | July 15 to 26 |
| 29th World Conference WAGGGS | Canada | July 16 to 24 |
| Invitation of High International Rendezvous '96 | U.S.A. | July 27—Aug. 3 |
| Camelot '96 | England | August 4 to 9 |
| Nippon Venture '96 | Japan | August 1 to 17 |
| 17th A. P. Jamboree Scout | Korea | August 7 to 13 |
| **National Level** | | |
| 53 National Adventure Programme | N. T. C. | May 1 to 10 |
| HWB (Bulbul & Ranger) | N. T. C. | May 3 to 12 |
| Course for ALT (Scout wing) | N. T. C. | May 5 to 13 |
| Course for ALT (Guide wing) | N. T. C. | May 14 to 23 |
| 54 National Adventure Programme | N. T. C. | May 16 to25 |
| P. L. Training Course | N. T. C. | May 18 to 23 |

| Name of the Course/Events | Place | Dates |
|---|---|---|
| Course for LT (Guide wing) | N. T. C. | May 24 to 30 |
| Anti drug—Anti smoking day | All over country | May 31st |
| 55 National Adventure Course | N T. C. | June 1 to 10 |
| World Environment day | All over country | June 5th |
| Rover Ranger Samagam | N. T. C. | June 9 to 13 |
| Course on Promise and law | N. T. C. | June 14 to 20 |
| National course for Professionals | N. H. Q. | June 14 to 23 |
| Basic Course for Commissioners | N. T. C. | July 1 to 5 |
| Testing Camp—Workshop | Salem | July 1 to 5 |
| Testing Camp—Workshop | Salem | July 6 to 10 |
| Reorientation Course for H.W.B. Holders | N. T. C. | July 6 to 10 |
| 40th Year of A. P. Region (Scout Wing) | All over Country | July 26 |
| Testing Camps | All over Country | |
| National School Sanitation Week | All over Country | Aug. 16 to 22 |
| Sadbhavana Diwas | All over Country | Aug. 20 |
| Testing Camps | | |
| **State Level** | | |
| ASOCs/DOCs/SGVs Meet | Besant Park | May 96 |
| State Training Team Meet | Bombay | May 96 |
| Badge Work Camps (24) | All over State | June 96 to September 96 |
| Dist. Trg. Commissioners Meet | Besant Park | July 96 |
| Badgework Camps (Cubs)–(12) | All over State | July 96 to Oct. 96 |
| Advance Course for Unit Leader (Cub & Scout Masters) | Kondajji and Besant Park | Aug. 96 Aug. 96 |

## What is Scouting and Guiding?

EDUCATIONAL METHOD
WAY OF LIFE
SCIENCE OF OUTING
TRAINING FOR CITIZENSHIP
INSPIRATION TO SELFLESS SERVICE

## ಸ್ಕೌಟಿಂಗ್ ಮತ್ತು ಗೈಡಿಂಗ್ ಎಂದರೇನು ?

ಶಿಕ್ಷಣ ವಿಧಾನ
ಜೀವನ ವಿಧಾನ
ಹೊರಾಂಗಣ ವಿಜ್ಞಾನ
ಉತ್ತಮ ಪೌರತ್ವಕ್ಕೆ ತರಬೇತಿ
ನಿಸ್ವಾರ್ಥ ಸೇವೆಗೆ ಸ್ಫೂರ್ತಿ

## "World Brother and Sister Hood Organisation"

---

## The Aims of Scout and Guide Movement

**We Build**

CHARACTER
SERVICE MOTTO AMONGST YOUTH
SKILLS
HEALTH

ವಿಶ್ವ ಸೋದರ, ಸೋದರಿ ವರ್ಗದ ಸಂಸ್ಥೆಯಾದ ಸ್ಕೌಟ್/ಗೈಡ್ ಸಂಸ್ಥೆಯ ಗುರಿ

ಯುವ ಜನಾಂಗದಲ್ಲಿ

ಸಚ್ಚಾರಿತ್ರ್ಯ
ಆರೋಗ್ಯ
ಕೌಶಲ್ಯ
ಮತ್ತು ಸೇವಾಮನೋಭಾವನೆ ಇವುಗಳನ್ನು ಬೆಳೆಸುವುದು.




ಇತ್ತೀಚೆಗೆ ಪುತ್ತೂರು ತಾಲ್ಲೂಕು ಈಶ್ವರ ಮಂಗಲದಲ್ಲಿ ದಕ್ಷಿಣ ಕನ್ನಡ ಜಿಲ್ಲಾಮಟ್ಟದ ಸ್ಕೌಟ್ ಗೈಡ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ರಾಜ್ಯ ತರಬೇತಿ ಆಯುಕ್ತ ಶ್ರೀ ಕೆ. ನಾರಾಯಣಶೆಟ್ಟಿ ಮಾತನಾಡುತ್ತಿರುವುದು. ವೇದಿಕೆಯಲ್ಲಿ ಪುತ್ತೂರು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ. ಸಂಜೀವಶೆಟ್ಟಿ ಅಧ್ಯಕ್ಷ ಶ್ರೀ ಗಣಪತಿ ನಾಯಕ್, ರಾಜ್ಯ ಸಂಸ್ಥೆಯ ಸಂಪರ್ಕಾಧಿಕಾರಿ ಶ್ರೀ ಚೆಲ್ಲಯ್ಯ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಐರಿನ್ ಡಿ' ಕುನ್ಹ.





To,
Smt.P.Saroja,
State Organising Commissioner(G)
Bharat Scouts and Guides,
No.10, Municipal Quarters,
Queens' Road, BANGALORE-560001.

THE BHARAT SCOUTS AND GUIDES
Prof. P. Sivashankar Circle
Kondajji Basappa Road
Fort, Bangalore-560 002

Published for the Bharat Scouts and Guides, Karnataka State Headquarters, Prof. P. Sivashankar Circle, Kondajji Basappa Road Fort, Bangalore-560 002, by the State Secretary and Printed by Sri [illegible] M.D. at S.J.M. Mudrana Pvt. Ltd. Bangalore-[illegible]0 027 Phone : 2236469